

# ಎಪಿಗ್ರಾಫಿಯ ಕರ್ನಾಟಿಕ

# EPIGRAPHIA CARNATICA

## ಕೊಡಗು ಜಿಲ್ಲೆ

## Coorg District

ಕನ್ನಡ ಅಧ್ಯಯನ ಸಂಸ್ಥೆ

ಮೈಸೂರು ವಿಶ್ವವಿದ್ಯಾನಿಲಯ

INSTITUTE OF KANNADA STUDIES

UNIVERSITY OF MYSORE

1972

ಎಪಿಗ್ರಾಫಿಯ ಕರ್ನಾಟಿಕ

ಮೈಸೂರು ಸರ್ಕಾರದ ಉದಾರ ನೆರವಿನಿಂದ ಪ್ರಕಟವಾಗುತ್ತಿದೆ

ಮೈಸೂರು ಸರ್ಕಾರಕ್ಕೆ ನಮ್ಮ ಕೃತಜ್ಞತೆಗಳು

Epigraphia Carnatica

published by the generous help of the Government of Mysore
Our grateful thanks to the Government of Mysore

# ಎಪಿಗ್ರಾಫಿಯ ಕರ್ನಾಟಕ

# EPIGRAPHIA CARNATICA

ಸಂಪುಟ ಒಂದು

Volume One



ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ

INSTITUTE OF KANNADA STUDIES
UNIVERSITY OF MYSORE
1972

*Epigraphia Carnatica, Vol. I* ; published by the Institute of Kannada Studies, University of Mysore, Manasa Gangotri, Mysore-6 ; First revised edition by the Institute, 1972. pp. 20+xlviii+124+frontispiece and xvii plates. Printer : Director, Mysore University Printing Press, Manasa Gangotri, Mysore-6.






Copies available from
*Director*
Prasaranga, Manasa Gangotri
Mysore-6 (India)



*Price* : **Rs. 15 ; $ 4 ; £ 1.5**





# ಎಪಿಗ್ರಾಫಿಯ ಕರ್ನಾಟಿಕ ಪರಿಷ್ಕರಣ ಹಾಗೂ ಪುನರ್ಮುದ್ರಣ ಯೋಜನೆ

# Epigraphia Carnatica Revision and Reprint Project

## ಸಲಹಾ ಸಮಿತಿ

## Advisory Committee

ಅಧ್ಯಕ್ಷ

**ಡಾ. ಹಾ. ಮಾ. ನಾಯಕ**

ಕನ್ನಡ ಮತ್ತು ಭಾಷಾವಿಜ್ಞಾನ ಪ್ರಾಧ್ಯಾಪಕ
ನಿರ್ದೇಶಕ, ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

*Chairman*

**Dr. H. M. Nayak**

Professor of Kannada and Linguistics
Director, Institute of Kannada Studies
University of Mysore, Mysore

ಸದಸ್ಯರು

Members

1. **ಡಾ. ಎಂ. ಶೇಷಾದ್ರಿ**
ನಿರ್ದೇಶಕರು, ಪುರಾತತ್ತ್ವ ಇಲಾಖೆ, ಮತ್ತು
ಪ್ರಾಧ್ಯಾಪಕ, ಪ್ರಾಚೀನ ಇತಿಹಾಸ ಮತ್ತು
ಪುರಾತತ್ವವಿಭಾಗ, ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

*Dr. M. Seshadri*
Director of Archaeology and Prof. and
Head of the Dept. of Ancient History
and Archaeology, University of Mysore
Mysore

2. ಡಾ. ಜಿ. ಎಸ್. ಗಾಯಿ
ಪ್ರಧಾನ ಶಾಸನತಜ್ಞ
ಭಾರತೀಯ ಪುರಾತತ್ತ್ವ ಸರ್ವೇಕ್ಷಣ
ಮೈಸೂರು

*Dr. G. S. Gai*
Chief Epigraphist
Archaeological Survey of
India, Mysore

3. ಡಾ. ಟಿ. ವಿ. ಮಹಾಲಿಂಗಂ
ಪ್ರಾಧ್ಯಾಪಕ (ನಿವೃತ್ತ), ಪ್ರಾಚೀನ
ಇತಿಹಾಸ ಮತ್ತು ಪುರಾತತ್ತ್ವ ವಿಭಾಗ
ಮದರಾಸು ವಿಶ್ವವಿದ್ಯಾನಿಲಯ, ಮದರಾಸು

*Dr. T. V. Mahalingam*
Professor of Ancient
History and Archaeology (Retd.)
University of Madras
Madras

4. **ಡಾ. ಎಂ. ಚಿದಾನಂದಮೂರ್ತಿ**
ರೀಡರ್, ಕನ್ನಡ ವಿಭಾಗ
ಬೆಂಗಳೂರು ವಿಶ್ವವಿದ್ಯಾನಿಲಯ
ಬೆಂಗಳೂರು

*Dr. M. Chidananda Murthy*
Reader in Kannada
Bangalore University
Bangalore

5. **ಡಾ. ಎಸ್. ಎಚ್. ರಿತ್ತಿ**
ಪ್ರಾಧ್ಯಾಪಕ, ಪ್ರಾಚೀನ ಭಾರತೀಯ
ಇತಿಹಾಸ ಮತ್ತು ಸಂಸ್ಕೃತಿ ವಿಭಾಗ
ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ

*Dr. S. H. Ritti*
Professor of Ancient Indian History
and Culture, Karnatak University
Dharwar

6. ಡಾ. ಎಚ್. ತಿಪ್ಪೇರುದ್ರಸ್ವಾಮಿ
ರೀಡರ್, ಕನ್ನಡ ವಿಭಾಗ
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು

*Dr. H. Thipperudraswamy*
Reader in Kannada
Institute of Kannada Studies
Manasa Gangotri
Mysore

7. ಡಾ. ಎ. ವಿ. ನರಸಿಂಹಮೂರ್ತಿ
ರೀಡರ್, ಪ್ರಾಚೀನ ಇತಿಹಾಸ ಮತ್ತು
ಪುರಾತತ್ವ ವಿಭಾಗ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

*Dr. A. V. Narasimha Murthy*
Reader in Ancient History and
Archaeology, University of Mysore, Mysore

ಸಂಪಾದಕ ವರ್ಗ
Editorial Staff

ಶಾಸನತಜ್ಞ
ಡಾ. ಬಾ. ರಾ. ಗೋಪಾಲ್

Epigraphist
*Dr. B. R. Gopal*

ಉಪ ಶಾಸನತಜ್ಞ
ಎಂ. ಹನುಮಂತರಾವ್

Asst. Epigraphist
*M. Hanumantha Rao*

ಶಾಸನ ಸಹಾಯಕರು
1. ಎಚ್. ಎಂ. ನಾಗರಾಜರಾವ್, 2. ಎಸ್. ಎಸ್. ಜಾಗೀರ್‌ದಾರ್

Epigraphical Assistants
1. *H. M. Nagaraja Rao*, 2. *S. S. Jagirdar*

# ಮೊದಲ ಮಾತು

ಯಾವುದೇ ಪ್ರದೇಶದ ಭಾಷೆ, ಸಾಹಿತ್ಯ, ಸಂಸ್ಕೃತಿ, ಇತಿಹಾಸಗಳ ಅಧ್ಯಯನಕ್ಕೆ ಶಾಸನಗಳು ಅಮೂಲ್ಯ ಆಕರಗಳು. ಶಾಸನಗಳು ಒಂದು ಜನಾಂಗದ ಆಸ್ತಿ. ಸುದೈವದಿಂದ ನಮ್ಮ ನಾಡಿನ ಶಾಸನ ಸಂಪತ್ತು ಹೇರಳವಾಗಿದೆ. ತಮಿಳನ್ನು ಬಿಟ್ಟರೆ ಕನ್ನಡದಲ್ಲಿಯೇ ಅತ್ಯಂತ ಹೆಚ್ಚು ಸಂಖ್ಯೆಯ ಶಾಸನಗಳಿವೆ ಎಂದು ಅಂದಾಜು ಮಾಡಲಾಗಿದೆ. ಯಾರ ಕಣ್ಣಿಗೂ ಬೀಳದೆ ಅಜ್ಞಾತವಾಗಿರುವ ಶಾಸನಗಳು ಇನ್ನೂ ಅಸಂಖ್ಯಾತವಾಗಿವೆ. ಇಂಥ ಶಾಸನಗಳನ್ನು ಹುಡುಕುವ ಸಂಗ್ರಹಿಸುವ ಪ್ರಕಟಿಸುವ ಕೆಲಸ ಆಗಬೇಕಾಗಿದೆ; ಈಗಾಗಲೇ ಪ್ರಕಟವಾಗಿರುವ ಶಾಸನಗಳನ್ನು ಪರಿಷ್ಕರಿಸುವ, ವಿಶ್ಲೇಷಿಸುವ ಕೆಲಸವೂ ಅಗತ್ಯವಾಗಿದೆ. ಹೊಸ ಆಧಾರಗಳ ಬೆಳಕಿನಲ್ಲಿ, ಹೊಸ ಸಂಶೋಧನೆಗಳ ದೃಷ್ಟಿಯಲ್ಲಿ ಈ ಕೆಲಸ ಸತತವಾಗಿ ನಡೆಯಬೇಕಾಗುತ್ತದೆ.

ಕನ್ನಡ ಶಾಸನ ಪ್ರಕಟಣೆಗಳಲ್ಲಿ ಮಾತ್ರವಲ್ಲ, ಯಾವುದೇ ಭಾಷೆಯ ಇಂಥ ಪ್ರಕಟಣೆಗಳಲ್ಲಿಯಾದರೂ 'ಎಪಿಗ್ರಾಫಿಯ ಕರ್ನಾಟಿಕ' ಸಂಪುಟಗಳು ಒಂದು ಅಪೂರ್ವ ಸಿದ್ಧಿ; ಬೃಹತ್ತು ಮಹತ್ತುಗಳೆರಡರಲ್ಲಿಯೂ ಹೆಮ್ಮೆ ಪಡಬಹುದಾದ ಅದ್ವಿತೀಯ ಸಾಧನೆ. ೧೮೮೪ರಲ್ಲಿ ಮೈಸೂರಿನಲ್ಲಿ ಪುರಾತತ್ವ ಇಲಾಖೆ ಸ್ಥಾಪನೆಯಾದಾಗ ಅದರ ಒಪ್ಪೊತ್ತಿನ ನಿರ್ದೇಶಕರಾಗಿ ನೇಮಕಗೊಂಡ ಬಿ. ಎಲ್. ರೈಸ್ ಅವರು ೧೯೦೬ರ ವರೆಗಿನ ಮುಂದಿನ ಇಪ್ಪತ್ತೆರಡು ವರ್ಷಗಳ ಅವಧಿಯಲ್ಲಿ, ಅಂದಿನ ಮೈಸೂರು ರಾಜ್ಯದ ಎಂಟು ಜಿಲ್ಲೆಗಳಲ್ಲಿ ಮತ್ತು ಆಗ ಪ್ರತ್ಯೇಕ ರಾಜ್ಯವಾಗಿದ್ದ ಕೊಡಗಿನಲ್ಲಿ ೮೮೭೯ ಶಾಸನಗಳನ್ನು ಸಂಗ್ರಹಿಸಿದರು. ಈ ಶಾಸನಗಳನ್ನೆಲ್ಲ ಲಿಪ್ಯಂತರ, ಭಾಷಾಂತರಗಳೊಡನೆ ಅವರು 'ಎಪಿಗ್ರಾಫಿಯ ಕರ್ನಾಟಿಕ' ಮಾಲೆಯಲ್ಲಿ ಪ್ರಕಟಿಸಿದರು. ಹನ್ನೆರಡು ಸಂಪುಟಗಳ ಈ ಮಾಲೆಯ ಯೋಜನೆಯಂತೆ ಸಾಮಾನ್ಯವಾಗಿ ಒಂದು ಜಿಲ್ಲೆಯ ಶಾಸನಗಳು ಒಂದು ಸಂಪುಟದಲ್ಲಿ ಸೇರಿದವು. ಶ್ರವಣಬೆಳಗೊಳದ ಶಾಸನಗಳಿಗಾಗಿಯೇ ಒಂದು ಸಂಪುಟ (೨) ಮೀಸಲಾಯಿತು. ಇಂದಿನ ಮಂಡ್ಯ ಜಿಲ್ಲೆಯನ್ನೊಳಗೊಂಡ ಅಂದಿನ ಮೈಸೂರು ಹಾಗೂ ಶಿವಮೊಗ್ಗ ಜಿಲ್ಲೆಯ ಶಾಸನಗಳು ಎರಡೆರಡು ಸಂಪುಟಗಳಲ್ಲಿ (೩–೪ ಮತ್ತು ೭–೮) ಪ್ರಕಟವಾದವು. ರೈಸರ ನಂತರ ಅಧಿಕಾರಕ್ಕೆ ಬಂದ ಆರ್. ನರಸಿಂಹಾಚಾರ್ಯರು ತಮ್ಮ ೧೬ ವರ್ಷಗಳ ಅಧಿಕಾರಾವಧಿಯಲ್ಲಿ ಸುಮಾರು ೫೦೦೦ ಶಾಸನಗಳನ್ನು ಕಂಡುಹಿಡಿದರು. ಇವುಗಳಲ್ಲಿ ಮುಖ್ಯವಾದವನ್ನೆಲ್ಲ ತಮ್ಮ ವಾರ್ಷಿಕ ವರದಿಗಳಲ್ಲಿ ಪ್ರಕಟಿಸುತ್ತಾ ಬಂದರು. 'ಎಪಿಗ್ರಾಫಿಯ ಕರ್ನಾಟಿಕ' ಮಾಲೆಯ ಎರಡನೆಯ ಸಂಪುಟವನ್ನು (ಶ್ರವಣಬೆಳಗೊಳ) ಅವರು ಆಮೂಲಾಗ್ರವಾಗಿ ಪರಿಷ್ಕರಿಸಿ ೧೯೨೩ರಲ್ಲಿ ಹೊಸ ಆವೃತ್ತಿಯನ್ನು ಪ್ರಕಟಿಸಿದರು. ಪುರಾತತ್ವ ಇಲಾಖೆ ೧೯೨೨ರ ನಂತರ ೧೯೪೪ರ ವರೆಗೆ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸೇರಿತ್ತು. ಆಗ ಓರಿಯಂಟಲ್ ಲೈಬ್ರೆರಿಯ ಕ್ಯೂರೇಟರ್ ಅವರು ಇಲಾಖೆಗೆ ಒಪ್ಪೊತ್ತಿನ ನಿರ್ದೇಶಕರಾಗಿರುತ್ತಿದ್ದರು. ಆಮೇಲೆ ಅದು ಸರ್ಕಾರದ ಇಲಾಖೆಯಾದರೂ ವಿಶ್ವವಿದ್ಯಾನಿಲಯದ ಇತಿಹಾಸ ಮತ್ತು ಪ್ರಾಚೀನ ಇತಿಹಾಸ ಹಾಗೂ ಪ್ರಾಕ್ತನಶಾಸ್ತ್ರ ವಿಭಾಗಗಳ ಮುಖ್ಯರು ಪದನಿಮಿತ್ತ ನಿರ್ದೇಶಕರಾಗಿದ್ದರು. ಉದ್ದಕ್ಕೂ ಇಲಾಖೆ ಶಾಸನ ಪರಿವೀಕ್ಷಣೆಯ ಕೆಲಸವನ್ನು ಮುಂದುವರಿಸಿಕೊಂಡು ಬಂದಿದೆ. ಫಲವಾಗಿ ವರ್ಷ ವರ್ಷವೂ ಹೊಸ ಶಾಸನಗಳು ಬೆಳಕಿಗೆ ಬರುತ್ತಿವೆ.

'ಎಪಿಗ್ರಾಫಿಯ ಕರ್ನಾಟಿಕ' ಸಂಪುಟಗಳು ಕಳೆದ ಕೆಲವು ದಶಕಗಳಿಂದ ತುಂಬ ದುರ್ಲಭವಾಗಿದ್ದು, ಅವುಗಳು ವಿದ್ಯಾರ್ಥಿಗಳಿಗೂ, ವಿದ್ವಾಂಸರಿಗೂ ಅನಿವಾರ್ಯ ಆಕರ ಗ್ರಂಥಗಳಾಗಿದ್ದುದರಿಂದ ಅವನ್ನು ಪರಿಷ್ಕರಿಸಿ ಪುನರ್ಮುದ್ರಿಸುವ ಆವಶ್ಯಕತೆ ಬಹಳವಾಗಿತ್ತು. ೧೯೭೦ರ ಜನವರಿ ೨೪ರಂದು ಮೈಸೂರು ರಾಜ್ಯದ ಶಿಕ್ಷಣ ಸಚಿವ ಶ್ರೀ ಕೆ. ವಿ. ಶಂಕರಗೌಡ ಅವರ ಅಧ್ಯಕ್ಷತೆಯಲ್ಲಿ ಸೇರಿದ್ದ, ಕರ್ನಾಟಕ ಜೀವನ ಸಂಸ್ಕೃತಿಗಳನ್ನು ಕುರಿತ ಸಂಶೋಧನೆಗಳಿಗಾಗಿರುವ ಸಮನ್ವಯ ಸಮಿತಿಯ (Co-ordination Committee for Research Work on Karnataka Life and Culture) ಸಭೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರು ಈ ಪರಿಷ್ಕರಣ ಹಾಗೂ ಪುನರ್ಮುದ್ರಣದ ಸಲಹೆ ಮಾಡಿದರು; ಜವಾಬ್ದಾರಿಯನ್ನು ಹೊರಲು ಸಂಸ್ಥೆ ಸಿದ್ಧವೆಂದೂ ಹೇಳಿದರು. ಸಮಿತಿಯ ಸದಸ್ಯರೆಲ್ಲರೂ ಅವರಿಗೆ ಬೆಂಬಲ ನೀಡಿದರು; ಸಲಹೆಯನ್ನು ಸ್ವಾಗತಿಸಿದರು. ಯೋಜನೆಯ ವಿವರಗಳನ್ನು ಕನ್ನಡ ಅಧ್ಯಯನ ಸಂಸ್ಥೆ ಸಿದ್ಧಪಡಿಸಬೇಕೆಂದೂ, ಯೋಜನೆಗೆ ಅಗತ್ಯವಾದ ಹಣಕಾಸನ್ನು ಒದಗಿಸಲು ಸರ್ಕಾರಕ್ಕೆ ಶಿಫಾರಸ್ ಮಾಡಬೇಕೆಂದೂ, ಯೋಜನೆಯನ್ನು ಕನ್ನಡ ಅಧ್ಯಯನ ಸಂಸ್ಥೆಗೆ ವಹಿಸಬೇಕೆಂದೂ ಸಮಿತಿ ನಿರ್ಣಯಮಾಡಿತು.

ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರು ಯೋಜನೆಯ ವಿವರಗಳನ್ನು ಚರ್ಚಿಸಲು ಮಾರ್ಚಿ ೭, ೧೯೭೦ರಂದು ತಜ್ಞರ ಒಂದು ಸಭೆ ಕರೆದರು. ಅದರಲ್ಲಿ ಡಾ. ಎಂ. ಶೇಷಾದ್ರಿ, ಡಾ. ಜಿ. ಎಸ್. ಗಾಯಿ, ಮತ್ತು ಡಾ. ಎ. ವಿ. ನರಸಿಂಹಮೂರ್ತಿ ಅವರು ಭಾಗವಹಿಸಿದ್ದರು. ಆ ಸಭೆಯಲ್ಲಿ 'ಎಪಿಗ್ರಾಫಿಯ ಕರ್ನಾಟಿಕ' ಪರಿಷ್ಕರಣ ಹಾಗೂ ಪುನರ್ಮುದ್ರಣಕ್ಕೆ ಸಂಬಂಧಿಸಿದಂತೆ ಸುಮಾರು ಹನ್ನೆರಡೂವರೆ ಲಕ್ಷ ರೂಪಾಯಿಗಳ ಯೋಜನೆಯೊಂದನ್ನು ಸಿದ್ಧಪಡಿಸಲಾಯಿತು. ಕನ್ನಡ

ಅಧ್ಯಯನ ಸಂಸ್ಥೆಯ ನಿರ್ದೇಶಕರು ಯೋಜನೆಯನ್ನು ವಿಶ್ವವಿದ್ಯಾನಿಲಯದ ಮೂಲಕ ೪-೪-೧೯೭೦ರಂದು ಸರ್ಕಾರಕ್ಕೆ ಕಳಿಸಿದರು. ಸರ್ಕಾರ ಯೋಜನೆಯನ್ನು ಒಪ್ಪಿ ೧೬-೩-೧೯೭೧ರಂದು ಆಜ್ಞೆ ಹೊರಡಿಸಿತಾದರೂ, ಎಲ್ಲ ತಾಂತ್ರಿಕ ಅಡಚಣೆಗಳನ್ನೂ ದಾಟಿಕೊಂಡು ಕಾರ್ಯಾರಂಭವಾಗಲು ಸಾಧ್ಯವಾದದ್ದು ೧೯೭೧ರ ಡಿಸೆಂಬರ್ ೧೬ರಿಂದ. ಈ ಯೋಜನೆಯ ಕಾರ್ಯದಲ್ಲಿ ಸಲಹೆ ನೀಡಲು ವಿಶ್ವವಿದ್ಯಾನಿಲಯ, ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರ ಅಧ್ಯಕ್ಷತೆಯಲ್ಲಿ ಒಂದು ಸಲಹಾ ಸಮಿತಿಯನ್ನು ನೇಮಿಸಿತು. ಅದರಲ್ಲಿ ರಾಜ್ಯದ ಪುರಾತತ್ವ ಇಲಾಖೆಯ ನಿರ್ದೇಶಕರೂ, ಭಾರತ ಸರ್ಕಾರದ ಮುಖ್ಯ ಶಾಸನಾಧಿಕಾರಿಗಳೂ, ಮೈಸೂರು, ಬೆಂಗಳೂರು ಕರ್ನಾಟಕ ಹಾಗೂ ಮದ್ರಾಸ್ ವಿಶ್ವವಿದ್ಯಾನಿಲಯಗಳ ಕೆಲವು ವಿದ್ವಾಂಸರೂ ಸದಸ್ಯರಾಗಿದ್ದಾರೆ. ಈ ಸಮಿತಿ ಮೊದಲಬಾರಿಗೆ ೨೪-೧೨-೧೯೭೧ರಂದು ಸಭೆ ಸೇರಿ 'ಎಪಿಗ್ರಾಫಿಯ ಕರ್ನಾಟಿಕ' ಸಂಪುಟಗಳನ್ನು ಯಾವ ದಿಕ್ಕಿನಲ್ಲಿ ಪರಿಷ್ಕರಿಸಬೇಕೆಂದು ವಿವರವಾಗಿ ಚರ್ಚಿಸಿತು ; ಸ್ಥೂಲವಾದ ಧೋರಣೆಗಳನ್ನು ರೂಪಿಸಿತು. ಸಮಿತಿ ಕೈಗೊಂಡ ಕೆಲವು ಮುಖ್ಯ ತೀರ್ಮಾನಗಳು ಇವು : ಕನ್ನಡ ಶಾಸನಗಳ ರೋಮನ್ ಲಿಪ್ಯಂತರ ಕೊಡಬೇಕಾಗಿಲ್ಲ ; ಅಕನ್ನಡ ಶಾಸನಗಳನ್ನು ಕನ್ನಡ ಲಿಪಿಯಲ್ಲಿ ರೋಮನ್ ಲಿಪ್ಯಂತರದೊಡನೆ ಕೊಡಬೇಕು ; ಬೇರೆ ಬೇರೆ ಮೂಲಗಳಲ್ಲಿ ಪ್ರಕಟವಾಗಿರುವ ಶಾಸನಗಳನ್ನು ಒಂದೆಡೆ ತರಬೇಕು ; ಪ್ರತಿಯೊಂದು ಶಾಸನಕ್ಕೂ ಮೊದಲು ಅದರ ಚಿಕ್ಕ ಪರಿಚಯ ಕೊಡಬೇಕು ; ಅಗತ್ಯವೆನಿಸುವ ಉಪಯುಕ್ತ ಅನುಬಂಧಗಳನ್ನು ಸೇರಿಸಬೇಕು ; ಪೀಠಿಕೆಯನ್ನೂ ಪಠ್ಯಗಳನ್ನೂ ಅನುವಾದಗಳನ್ನೂ ಸೂಕ್ತ ಆಧಾರಗಳ ನೆರವಿನಿಂದ ಪರಿಷ್ಕರಿಸಬೇಕು.

ಸಲಹಾ ಸಮಿತಿಯ ಸಲಹೆಗಳಿಗನುಸಾರವಾಗಿ 'ಎಪಿಗ್ರಾಫಿಯ ಕರ್ನಾಟಿಕ' ಸಂಪುಟಗಳ ಪರಿಷ್ಕರಣಕಾರ್ಯ ಆರಂಭವಾಗಿದ್ದು ಈಗ ಮೊದಲನೆಯ ಸಂಪುಟ ಪ್ರಕಟವಾಗುತ್ತಿದೆ. ಈ ಸಂಪುಟದಲ್ಲಿ ಕೊಡಗು ಜಿಲ್ಲೆಯ ೧೦೬ ಶಾಸನಗಳಿವೆ. ಬಿ. ಎಲ್. ರೈಸ್ ಅವರು ತಮ್ಮ ಶಾಸನ ಸಂಪುಟಗಳ ಮಾಲೆಯಲ್ಲಿ ಇದನ್ನು ಮೊದಲ ಸಂಪುಟವನ್ನಾಗಿ ೧೮೮೬ರಲ್ಲಿ ಪ್ರಕಟಿಸಿದರು. ಇದರಲ್ಲಿ ಕೊಡಗಿನ ೨೩ ಶಾಸನಗಳು ಭಾಷಾಂತರ ಮತ್ತು ಲಿಪ್ಯಂತರಗಳೊಡನೆ ಪ್ರಕಟವಾದುವು. 'ನ್ಯೂ ಇಂಪೀರಿಯಲ್ ಗೆಜೆಟಿಯರ್ ಆಫ್ ಇಂಡಿಯಾ'ಕ್ಕಾಗಿ ಕೊಡಗಿನ ಗೆಜೆಟಿಯರನ್ನು ಸಿದ್ಧಪಡಿಸಬೇಕಾಗಿ ಬಂದಾಗ ಪುನರ್ಪರಿವೀಕ್ಷಣಕಾರ್ಯ ಅಗತ್ಯವೆಂದು ರೈಸ್ ಭಾವಿಸಿದರು. ಅದರ ಫಲವಾಗಿ ದೊರೆತ ಹೊಸ ಶಾಸನಗಳನ್ನು 'ಎಪಿಗ್ರಾಫಿಯ ಕರ್ನಾಟಿಕ'ದ ಬೆಂಗಳೂರು ಮತ್ತು ತುಮಕೂರು ಸಂಪುಟಗಳ (೯ ಮತ್ತು ೧೨–ಪ್ರಥಮ ಆವೃತ್ತಿ) ಅನುಬಂಧಗಳಲ್ಲಿ ಸೇರಿಸಿದರು. ಈ ಎಲ್ಲ ಶಾಸನಗಳನ್ನೂ ಒಟ್ಟಿಗೆ ಸೇರಿಸಿ ೧೯೧೪ರಲ್ಲಿ ರೈಸರು ಕೊಡಗು ಶಾಸನಗಳ ಪರಿಷ್ಕೃತ ಆವೃತ್ತಿಯನ್ನು ಪ್ರಕಟಿಸಿದರು. ಈ ಆವೃತ್ತಿಯಲ್ಲಿ ಸೇರಿದ ಶಾಸನಗಳ ಸಂಖ್ಯೆ ೭೫. 'ಎಪಿಗ್ರಾಫಿಯ ಕರ್ನಾಟಿಕ' ಸಂಪುಟಗಳ ಪರಿಷ್ಕರಣ ಹಾಗೂ ಪುನರ್ಮುದ್ರಣ ಯೋಜನೆಯಂತೆ ಈಗ ಈ ಸಂಪುಟವನ್ನು ಮತ್ತೆ ಪರಿಷ್ಕರಿಸಲಾಗಿದೆ. ಈ ಸಂದರ್ಭದಲ್ಲಿ ಪ್ರಕಟಿತ ಶಾಸನಗಳ ಪಾಠಗಳನ್ನು ಮೂಲದೊಂದಿಗೆ ತಾಳೆ ನೋಡುವ ಸಲುವಾಗಿ ಎರಡು ಪರಿವೀಕ್ಷಣ ಪ್ರವಾಸಗಳನ್ನು ಕೈಗೊಳ್ಳಲಾಗಿತ್ತು. ಅನೇಕ ಶಾಸನಗಳನ್ನು ಮೂಲದೊಡನೆ ಹೋಲಿಸಿ ಅಗತ್ಯವೆನಿಸಿದಲ್ಲಿ ತಿದ್ದುಪಡಿಮಾಡಲಾಗಿದೆ. ಮೂಲಶಾಸನಗಳು ದೊರೆಯದ ಸಂದರ್ಭದಲ್ಲಿ ಮಾತ್ರ ಅವುಗಳ ಪಾಠಗಳನ್ನು ಹಾಗೆಯೇ ಉಳಿಸಿಕೊಳ್ಳಲಾಗಿದೆ. ಓದಲು ಸಾಧ್ಯವಾಗದ ಸ್ಥಿತಿಯಲ್ಲಿದ್ದ ಹಿಂದಿನ ಆವೃತ್ತಿಯ ೭೨ನೆಯ ಶಾಸನವನ್ನು ಕೈಬಿಡಲಾಗಿದೆ. ಈ ಸಂಪುಟದ ಒಂದು ವಿಶೇಷವೆಂದರೆ, ಇದುವರೆಗೆ ಗಮನಕ್ಕೆ ಬಾರದಿದ್ದ ಮೂವತ್ತೆರಡು ಹೊಸ ಶಾಸನಗಳನ್ನು ಇದು ಒಳಗೊಂಡಿದೆ. ಹೊಸ ಶಾಸನಗಳಿಗಾಗಿ ಪರಿವೀಕ್ಷಣೆ ನಡೆಸುವುದು ನಮ್ಮ ಯೋಜನೆಯಲ್ಲಿ ಸೇರಿಲ್ಲ, ನಿಜ. ಆದರೆ ಅನಾಯಾಸವಾಗಿ ದೊರೆತ ಶಾಸನಗಳನ್ನು ಬಿಡಬಾರದೆಂದು ಅವನ್ನು ಇಲ್ಲಿ ಸೇರಿಸಿದ್ದೇವೆ. ಈ ದಿಕ್ಕಿನಲ್ಲಿ ಆಗಬೇಕಾದ ಕೆಲಸ ಇನ್ನೂ ಎಷ್ಟಿದೆ ಎಂಬುದನ್ನು ಇದು ತೋರಿಸುತ್ತದೆ. ಸಮಗ್ರವಾದ ಹೊಸ ಪರಿವೀಕ್ಷಣೆಯೊಂದರ ಅಗತ್ಯ ಬಹುವಾಗಿದೆ ಎಂಬುದರಲ್ಲಿ ಅನುಮಾನವಿಲ್ಲ. ಅಜ್ಞಾತವಾಸದಲ್ಲಿರುವ ಈ ಶಾಸನಗಳು ಅಂತಿಮವಾಗಿ ಕಣ್ಮರೆಯಾಗಿ ಹೋಗುವ ಮೊದಲೇ ಈ ಕಾರ್ಯವನ್ನು ಕೈಗೊಳ್ಳಬೇಕಾಗಿದೆ.

ಹಿಂದಿನ ಮುದ್ರಣಕ್ಕೆ ಹೋಲಿಸಿದರೆ ಈ ಮುದ್ರಣದ ಇನ್ನೂ ಕೆಲವು ವಿಶೇಷಗಳು ಇವು : ರೈಸರು ಬರೆದಿದ್ದ ಪೀಠಿಕೆಗೆ ಬದಲಾಗಿ ಹೊಸ ಪೀಠಿಕೆಯನ್ನು ಸೇರಿಸಿದೆ ; ಪ್ರತಿಯೊಂದು ಶಾಸನಕ್ಕೂ ಪರಿಚಯದ ಟಿಪ್ಪಣಿಯನ್ನು ಕೊಟ್ಟಿದೆ ; ಆಧುನಿಕ ಆವಶ್ಯಕತೆಗಳಿಗೆ ಅನುಗುಣವಾಗಿ ಕೆಲವು ಅನುಬಂಧಗಳನ್ನು ಜೋಡಿಸಿದೆ. ಇದೆಲ್ಲವನ್ನೂ ಸಂಪಾದಕೀಯ ಸಮಿತಿಯ ಸಲಹೆಗಳನ್ನನುಸರಿಸಿಯೇ ಮಾಡಿದೆ.

ಇಂಥ ಕೆಲಸಗಳಲ್ಲಿ ಪರಿಷ್ಕರಣ ಎನ್ನುವುದು ಕೊನೆಯ ಮಾತಾಗುವುದು ಸಾಧ್ಯವಿಲ್ಲ. ವ್ಯಕ್ತಿಗಾಗಲಿ ಸಂಸ್ಥೆಗಾಗಲಿ ಸೀಮಿತಗಳಿದ್ದೇ ಇರುತ್ತವೆ. ಯಾವುದೇ ಪರಿಷ್ಕರಣವನ್ನಾದರೂ ಕೈಗೊಳ್ಳುವವರು ಕೆಲವು ವ್ಯಕ್ತಿಗಳೇ ಆಗಿರುವುದರಿಂದ ಅವರ ದೃಷ್ಟಿ, ಧೋರಣೆ, ಅಧ್ಯಯನ, ಸಂಶೋಧನೆಗಳಿಂದ ಅವರ ಕೆಲಸವನ್ನು ಬೇರ್ಪಡಿಸಲು ಬರುವುದಿಲ್ಲ. ಬೇರೆಯವರಿಗೆ ಬೇರೆಯವೇ ಆದ ದೃಷ್ಟಿ, ಧೋರಣೆಗಳಿರುವುದು ಸಹಜ. ಆದುದರಿಂದ ಈ ಮಹತ್ಕಾರ್ಯದಲ್ಲಿ ನಾವು ಎಲ್ಲ

ಆಸಕ್ತರ ವಿದ್ವಾಂಸರ ಸಲಹೆ ಸೂಚನೆಗಳನ್ನು ಸ್ವೀಕರಿಸಲು ಸಿದ್ಧರಿದ್ದೇವೆ. ಇದು ನಾಡಿನ ಕೆಲಸ; ಎಲ್ಲರ ಹೊಣೆ. ಒಂದು ದೃಷ್ಟಿಯಿಂದ ಈ ಮೊದಲ ಸಂಪುಟ ಮಾದರಿ ಸಂಪುಟ. ಇದರ ಪರಿಷ್ಕರಣ ವಿನ್ಯಾಸಗಳ ಬಗೆಗೆ ದೊರೆಯುವ ವಿಮರ್ಶೆಗಳ ಬೆಳಕಿನಲ್ಲಿ ಮುಂದಿನ ಸಂಪುಟಗಳ ಪರಿಷ್ಕರಣಕಾರ್ಯ ಇನ್ನೂ ಉತ್ತಮಗೊಳ್ಳುವುದೆಂದು ನಾವು ನಿರೀಕ್ಷಿಸಿದ್ದೇವೆ. ಈ ಸಂಪುಟದಲ್ಲಿ ಕೆಲವು ಸ್ಖಾಲಿತ್ಯಗಳು ಉಳಿಯುವುದು ಅನಿವಾರ್ಯವಾಯಿತು. ಅವುಗಳ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಕೊಟ್ಟಿದ್ದೇವೆ. ವಾಚಕರು ಅದನ್ನು ಕೃಪೆಯಿಟ್ಟು ಗಮನಿಸಬೇಕು.

* * * * *

ಈ ಯೋಜನೆ ಕಾರ್ಯರೂಪಕ್ಕೆ ಬಂದದ್ದು ಮೈಸೂರು ಸರ್ಕಾರದ ಔದಾರ್ಯದಿಂದ; ಅದರ ಸಂಸ್ಕೃತಿ ಪ್ರೇಮದಿಂದ. ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ವೀರೇಂದ್ರ ಪಾಟೀಲರು, ಶಿಕ್ಷಣ ಸಚಿವರಾಗಿದ್ದ ಶ್ರೀ ಕೆ. ವಿ. ಶಂಕರಗೌಡರು ಮತ್ತು ಹಣಕಾಸಿನ ಸಚಿವರಾಗಿದ್ದ ಶ್ರೀ ರಾಮಕೃಷ್ಣ ಹೆಗ್ಗಡೆ ಅವರುಗಳು ಈ ಯೋಜನೆಯಲ್ಲಿ ವೈಯಕ್ತಿಕ ಆಸಕ್ತಿಯನ್ನು ತೋರದಿದ್ದಿದ್ದರೆ ಈ ದೊಡ್ಡ ಯೋಜನೆ ಬಹು ಸುಲಭವಾಗಿ ಸರ್ಕಾರದ ಒಪ್ಪಿಗೆ ಪಡೆಯುವುದು ಸಾಧ್ಯವಾಗುತ್ತಿರಲಿಲ್ಲ. ಈ ಮೂವರು ಮಹನೀಯರು ತಮ್ಮ ಭಾಷೆ ಸಾಹಿತ್ಯಗಳ ಮೇಲಿನ ಪ್ರೀತಿ ದೂರದೃಷ್ಟಿಗಳಿಂದ ಕೈಗೊಂಡ ಮಹತ್ವದ ಯೋಜನೆಗಳಲ್ಲಿ ಇದೂ ಒಂದಾಗಿದೆ. ಈ ಹೊತ್ತು ಅವರನ್ನು ನೆನೆಯುವುದು ನನಗೆ ತುಂಬ ಸಂತೋಷದ ಕೆಲಸ. ಹಿಂದಿನ ಸರ್ಕಾರದ ಇಂಥ ಕೆಲಸಗಳನ್ನು ಮುಂದುವರಿಸಿಕೊಂಡು ಹೋಗುವುದರಲ್ಲಿ ಮಾತ್ರವಲ್ಲದೆ ಹೊಸ ಹೊಸ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವುದರಲ್ಲಿಯೂ ಆಸಕ್ತಿವಹಿಸಿರುವ ಇಂದಿನ ಸರ್ಕಾರಕ್ಕೂ ನಮ್ಮ ಕೃತಜ್ಞತೆಯ ವಂದನೆಗಳು ಸಲ್ಲಬೇಕು. ಮುಖ್ಯಮಂತ್ರಿ ಶ್ರೀ ದೇವರಾಜ ಅರಸು ಅವರ ದಿಟ್ಟ ನಾಯಕತ್ವದಲ್ಲಿ ಸರ್ಕಾರ ಈಗಾಗಲೇ ಕೈಗೊಂಡಿರುವ ಅನೇಕ ನಿರ್ಣಯಗಳು ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳ ಅಭಿವೃದ್ಧಿಯ ದೃಷ್ಟಿಯಿಂದ ಅತ್ಯಂತ ಮಹತ್ವದವಾಗಿವೆ. ಹಣಕಾಸಿನ ಸಚಿವರಾದ ಶ್ರೀ ಎಂ. ವೈ. ಘೋರ್ಪಡೆಯವರು ಮತ್ತು ಶಿಕ್ಷಣ ಸಚಿವರಾದ ಶ್ರೀ ಎ. ಆರ್. ಬದರಿನಾರಾಯಣ್ ಅವರು ಇಂಥ ವಿಚಾರಗಳಲ್ಲಿ ವಿಶೇಷ ಆಸಕ್ತಿವಹಿಸಿರುವುದು ನಾಡಿನ ಜನತೆಗೆ ಹೆಚ್ಚಿನ ಸಂತೋಷವನ್ನುಂಟುಮಾಡಿದೆ. ನಾಡಿನ ಇತಿಹಾಸವನ್ನೇ ಬದಲಿಸಲು ಸಮರ್ಥವಾದ ಈ ಸರ್ಕಾರ ನಾಡಿನ ಭವಿಷ್ಯವನ್ನು ಉಜ್ವಲವಾಗಿ ರೂಪಿಸುತ್ತದೆಂಬುದರಲ್ಲಿ ಸಂದೇಹವಿಲ್ಲ.

'ಎಪಿಗ್ರಾಫಿಯ ಕರ್ನಾಟಿಕ' ಪರಿಷ್ಕರಣ ಹಾಗೂ ಪುನರ್ಮುದ್ರಣ ಯೋಜನೆಯಲ್ಲಿ, ಹಿಂದೆ ಶಿಕ್ಷಣ ಇಲಾಖೆಯ ಕಾರ್ಯದರ್ಶಿಯಾಗಿದ್ದ ಶ್ರೀ ಕೆ. ಆರ್. ರಾಮಚಂದ್ರನ್ ಅವರೂ, ಈಗ ಆ ಸ್ಥಾನದಲ್ಲಿರುವ ಶ್ರೀ ಸ್ಯಾಮ್ಯುಯಲ್ ಅಪ್ಪಾಜಿಯವರೂ ತುಂಬ ಸಹಕಾರ ನೀಡಿದ್ದಾರೆ. ಭಾರತದ ಪುರಾತತ್ವ ಇಲಾಖೆಯ ಶ್ರೀ ಎಸ್. ಆರ್. ರಾವ್ ಅವರು ನಾನು ಮೊದಲ ಸಲ ಈ ಯೋಜನೆಯನ್ನು ಸಮಿತಿಯ ಮುಂದಿಟ್ಟಾಗ ಹೆಚ್ಚಿನ ಬೆಂಬಲಕೊಟ್ಟರು; ಉತ್ಸಾಹದ ಮಾತಾಡಿದರು. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಹಾಗೂ ಪುರಾತತ್ತ್ವ ಶಾಸ್ತ್ರ ಶಾಖೆಯ ಮುಖ್ಯರಾಗಿರುವ ಡಾ. ಎ. ವಿ. ನರಸಿಂಹಮೂರ್ತಿಯವರು ಈ ಯೋಜನೆಯಲ್ಲಿ ಮೊದಲಿನಿಂದಲೂ ನನಗೆ ನೆರವು ನೀಡಿದ್ದಾರೆ. ಒಂದು ದೃಷ್ಟಿಯಲ್ಲಿ ಅವರೇ ಈ ಯೋಜನೆಯ ಮೂಲಕರ್ತೃವೆಂದರೂ ಸಲ್ಲುತ್ತದೆ. ಅನೇಕ ರೀತಿಯಲ್ಲಿ ನನಗೆ ಮಾರ್ಗದರ್ಶನ ಮಾಡುತ್ತಿದ್ದ ಪುರಾತತ್ವ ಇಲಾಖೆಯ ನಿರ್ದೇಶಕರಾಗಿದ್ದ ಡಾ. ಎಂ. ಶೇಷಾದ್ರಿಯವರು ಮೊದಲ ಸಂಪುಟ ಪ್ರಕಟವಾಗುವ ಮೊದಲೇ ತೀರಿಕೊಂಡಿರುವುದು ನನಗೆ ತುಂಬ ವ್ಯಥೆಯನ್ನುಂಟುಮಾಡಿದೆ. ಭಾರತ ಸರ್ಕಾರದ ಮುಖ್ಯ ಶಾಸನಾಧಿಕಾರಿಗಳಾದ ಡಾ. ಜಿ. ಎಸ್. ಗಾಯಿ ಅವರು ಮತ್ತು ಅವರ ಸಹೋದ್ಯೋಗಿಗಳು ನನಗೆ ಹೆಜ್ಜೆ ಹೆಜ್ಜೆಗೂ ಸಲಹೆ ಸೂಚನೆಗಳನ್ನು ಕೊಟ್ಟಿದ್ದಾರೆ. ಡಾ. ಗಾಯಿ ಮತ್ತು ಡಾ. ಕೆ. ವಿ. ರಮೇಶ್ ನನಗೆ ಸಮಸ್ಯೆಗಳು ಬಂದಾಗಲೆಲ್ಲ ಸಹಾಯಮಾಡಿದ್ದಾರೆ; ಈ ಸಂಪುಟದ ಕೆಲ ಭಾಗಗಳನ್ನು ನೋಡಿಕೊಟ್ಟಿದ್ದಾರೆ. ಅಂಥ ವಿದ್ವಾಂಸರ ನೆರವು ಈ ಯೋಜನೆಗೆ ದೊರಕಿರುವುದು ಒಂದು ಅದೃಷ್ಟ. ಸಂಪಾದಕೀಯ ಸಮಿತಿಯ ಸದಸ್ಯರೆಲ್ಲರೂ ತಮ್ಮ ಅನುಭವದ ವಿದ್ವತ್ತಿನ ತಜ್ಞ ಮಾರ್ಗದರ್ಶನವನ್ನು ನೀಡಿ ಉಪಕರಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಎಚ್. ನರಸಣ್ಣನವರೂ ಅವರ ಸಿಬ್ಬಂದಿ ವರ್ಗದವರೂ ಅಷ್ಟು ಸುಲಭವಲ್ಲದ ಈ ಕೆಲಸದಲ್ಲಿ ವಿಶೇಷವಾಗಿ ಸಹಕರಿಸಿದ್ದಾರೆ. ಕನ್ನಡ ಅಧ್ಯಯನ ಸಂಸ್ಥೆಯ ಛಾಯಾ ಚಿತ್ರಗ್ರಾಹಕ ಶ್ರೀ ಕೆ. ಆರ್. ಸುಂದರರಾಜ್ ಈ ಸಂಪುಟವನ್ನು ಸಚಿತ್ರವಾಗಿಸುವಲ್ಲಿ ಆಸಕ್ತಿವಹಿಸಿದ್ದಾರೆ. ಹಂತ ಹಂತಗಳಲ್ಲಿ ವಿಶ್ವವಿದ್ಯಾನಿಲಯದ ಅಧಿಕಾರಿಗಳೂ, ಅಧ್ಯಯನ ಸಂಸ್ಥೆಯ ವಿವಿಧ ವಿಭಾಗಗಳ ನನ್ನ ಸಹೋದ್ಯೋಗಿಗಳೂ ಸಹಕರಿಸಿ ನನ್ನ ಜವಾಬ್ದಾರಿಯ ಭಾರವನ್ನು ಕಡಿಮೆ ಮಾಡಿದ್ದಾರೆ. ಈ ಸಂಪುಟವನ್ನು ಪರಿಷ್ಕರಿಸಿ ಪ್ರಕಟಿಸಲು ಭಾರತ ಸರ್ಕಾರದ ಪುರಾತತ್ವ ಇಲಾಖೆಯ ಡೈರೆಕ್ಟರ್ ಜನರಲ್ ಅವರು ಸಮ್ಮತಿ ನೀಡಿದ್ದಾರೆ. ಇವರೆಲ್ಲರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಈ ಸಂದರ್ಭದಲ್ಲಿ ವಿಶ್ವವಿದ್ಯಾನಿಲಯದ ಕುಲಪತಿಗಳಾದ ಪ್ರೊ. ದೇ. ಜವರೇಗೌಡ ಅವರನ್ನು ನಾನು ಪ್ರತ್ಯೇಕವಾಗಿ ಸ್ಮರಿಸಬೇಕು. ಕನ್ನಡ ಅಧ್ಯಯನ ಸಂಸ್ಥೆಯ ಕಾರ್ಯಚಟುವಟಿಕೆಗಳಲ್ಲಿ ಹಾಗೂ ಈ ಯೋಜನೆ ಕಾರ್ಯರೂಪಕ್ಕೆ ಬರುವಲ್ಲಿ ಅವರು ಮೊದಲಿನಿಂದಲೂ ನನಗೆ ಬೆಂಬಲ ಕೊಟ್ಟಿದ್ದಾರೆ. ಅವರ ಧೈರ್ಯ, ಭರವಸೆ ಇಲ್ಲದಿದ್ದಿದ್ದರೆ ಬಹುಶಃ ಇಂಥದೊಂದು ದೊಡ್ಡ ಯೋಜನೆಯನ್ನು ನಿರ್ವಹಿಸುವ ಜವಾಬ್ದಾರಿಗೆ ನಾನು ಮುಂದಾಗುತ್ತಿರಲಿಲ್ಲ. ವಿಶ್ವವಿದ್ಯಾನಿಲಯದ ಅಭಿವೃದ್ಧಿಯಲ್ಲಿ ಕನ್ನಡದ ಕೆಲಸಕಾರ್ಯಗಳಲ್ಲಿ ತಮಗೆ ಸಹಜವಾಗಿರುವ ಉತ್ಸಾಹ ಅಭಿಮಾನಗಳನ್ನು ಅವರು ಈ ಯೋಜನೆಯ ಬಗೆಗೂ ತೋರಿಸಿದ್ದಾರೆ. ಅವರನ್ನು ನಾನು ತುಂಬ ಕೃತಜ್ಞತೆಯಿಂದ ನೆನೆಯುತ್ತೇನೆ.

ಇಂಥದೊಂದು ಯೋಜನೆಯ ಯಶಸ್ಸೆಲ್ಲ ಅದರಲ್ಲಿ ಪಾಲುಗೊಂಡ ಕೆಲಸಗಾರರನ್ನು ಅವಲಂಬಿಸಿರುತ್ತದೆ. ಶಾಸನ ಶಾಸ್ತ್ರದಂಥ ತಾಂತ್ರಿಕ ವಿಷಯದ ಕೆಲಸಗಳಿಗೆ ಪರಿಣತರು ದೊರಕುವುದು ಕಷ್ಟ. ಅದೃಷ್ಟವಶಾತ್ 'ಎಪಿಗ್ರಾಫಿಯ ಕರ್ನಾಟಿಕ'ದ ಪರಿಷ್ಕರಣ ಹಾಗೂ ಪುನರ್ಮುದ್ರಣ ಯೋಜನೆಗೆ ತಜ್ಞರ ದಕ್ಷರ ನೆರವು ದೊರೆತಿದೆ. ಅದಕ್ಕಾಗಿ ನಾನು ತುಂಬ ಸಂತೋಷಿಸುತ್ತೇನೆ. ಶ್ರೀ ಎಂ. ಹನುಮಂತರಾವ್ ಅವರು ಉಪಶಾಸನತಜ್ಞರಾಗಿ ಮೊದಲು ಈ ಯೋಜನೆಯ ಕೆಲಸವನ್ನು ಆರಂಭಿಸಿದರು. ಅವರು ರಾಜ್ಯದ ಪುರಾತತ್ವ ಇಲಾಖೆಯಲ್ಲಿ ಅಸಿಸ್ಟೆಂಟ್ ಡೈರೆಕ್ಟರ್ ಆಗಿದ್ದವರು. ತಮ್ಮ ಬದುಕಿನ ಅನೇಕ ವರ್ಷಗಳನ್ನು ಶಾಸನಗಳ ಮಧ್ಯೆ ಕಳೆದವರು. ಶ್ರೀ ಎಚ್. ಎಂ. ನಾಗರಾಜರಾವ್ ಮತ್ತು ಶ್ರೀ ಸೀತಾರಾಮ ಜಾಗೀರ್‌ದಾರ್ ಎಂಬ ಇಬ್ಬರು ತರುಣ ವಿದ್ವಾಂಸರು ಶಾಸನ ಸಹಾಯಕರಾಗಿ ಬಂದರು. ಈಚೆಗಷ್ಟೆ ಶಾಸನತಜ್ಞರಾಗಿ ಡಾ. ಬಾ. ರಾ. ಗೋಪಾಲ್ ಅವರ ಸೇವೆಯನ್ನು ಪಡೆಯುವುದು ಸಾಧ್ಯವಾಯಿತು. ಡಾ. ಗೋಪಾಲ್ ಭಾರತದ ಶಾಸನ ಇಲಾಖೆಯಲ್ಲಿ ಹಾಗೂ ಕರ್ನಾಟಕ ವಿಶ್ವವಿದ್ಯಾನಿಲಯಗಳಲ್ಲಿ ಅನೇಕ ವರ್ಷ ಸೇವೆ ಸಲ್ಲಿಸಿದ್ದಾರೆ; ಅನೇಕ ಗ್ರಂಥಗಳನ್ನೂ, ಲೇಖನಗಳನ್ನೂ ಪ್ರಕಟಿಸಿದ್ದಾರೆ; ಶಾಸನ ಸಂಪುಟಗಳನ್ನು ಸಂಪಾದಿಸಿದ್ದಾರೆ. ಇವರೆಲ್ಲರ ನೆರವಿನಿಂದ ಈ ಯೋಜನೆ ಪೂರ್ಣವಾಗಿ ಮುಂದಿನ ನಾಲ್ಕೈದು ವರ್ಷಗಳಲ್ಲಿ ಮುಗಿಯುತ್ತದೆ ಎಂಬುದರಲ್ಲಿ ನನಗೆ ವಿಶ್ವಾಸವಿದೆ. ಪ್ರಕೃತ ಸಂಪುಟದ ಬಹು ಪಾಲು ಕೆಲಸವನ್ನು ಶ್ರೀ ಹನುಮಂತರಾಯರು ನಿರ್ವಹಿಸಿದ್ದಾರೆ. ಪಾಠಗಳ ಅಂತಿಮ ಪರಿಷ್ಕರಣ ಅವರದ್ದೆ. ಟಿಪ್ಪಣಿಗಳನ್ನು ಬರೆದವರೂ ಅವರೆ. ಪೀಠಿಕೆ ಹಾಗೂ ಅನುವಾದಗಳ ಮೊದಲ ಕರಡುಗಳನ್ನು ಅವರು ಸಿದ್ಧಪಡಿಸಿದ್ದರು. ಅವನ್ನು ಡಾ. ಗೋಪಾಲ್ ಅವರು ಪರಿಷ್ಕರಿಸಿ ಅಂತಿಮ ಸ್ವರೂಪಕೊಟ್ಟಿದ್ದಾರೆ. ಈ ಸಹೋದ್ಯೋಗಿ ಮಿತ್ರರೆಲ್ಲ ತುಂಬ ವಿಶ್ವಾಸ ಅಭಿಮಾನಗಳಿಂದ ಈ ಕೆಲಸದಲ್ಲಿ ಪಾಲುಗೊಂಡಿದ್ದಾರೆ. ಅವರ ಶ್ರದ್ಧೆ, ನಿಷ್ಠೆ, ದುಡಿಮೆಗಳು ಕನ್ನಡಿಗರ ಮೆಚ್ಚುಗೆಗೆ ಪಾತ್ರವಾಗುತ್ತವೆಂಬುದರಲ್ಲಿ ನನಗೆ ನಂಬುಗೆಯಿದೆ. ಅವರನ್ನು ನೆನಸುವುದು ನನಗೆ ಯಾವಾಗಲೂ ಪ್ರಿಯವಾದ ಕೆಲಸ.

ಈ ಮಹತ್ಕಾರ್ಯದಲ್ಲಿ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಭಾಗಿಗಳಾಗಿರುವ ಎಲ್ಲರಿಗೂ ಇನ್ನೊಮ್ಮೆ ನನ್ನ ಕೃತಜ್ಞತೆಗಳನ್ನರ್ಪಿಸುತ್ತೇನೆ.

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು, ಆಗಸ್ಟ್ ೧, ೧೯೭೨

ಹಾ. ಮಾ. ನಾಯಕ
ನಿರ್ದೇಶಕ

## PREFACE

Inscriptions are invaluable sources for the study of the language, literature, culture and history of any region. Inscriptions constitute the heritage of a people. Fortunately, we have an abundance of inscriptions in our country. It is estimated that Kannada has the largest number of inscriptions, with the exception of Tamil. The number of such inscriptions as have not come to light yet and remained obscure is equally great. Efforts must be made to trace them out, collect them and publish them; it is equally essential that the published inscriptions are revised and analysed. This should more or less become a continuous process wherein revision and analysis are effected in the light of fresh evidences and researches.

The volumes of *Epigraphia Carnatica* mark a rare achievement not only with regard to the publication of inscriptions in Kannada but also in respect of such publications in any language. It is an achievement par excellence of which we may justly feel proud from the point of view of both copiousness and greatness. B. L. Rice, who in 1884, was appointed part-time Director of the Department of Archæology of the then Mysore, collected 8869 inscriptions in the course of 22 years i.e., till 1906, in the then eight districts of Mysore State and in Coorg, which was then a separate state. He brought out these inscriptions with their transliteration and translations in English in a series entitled *Epigraphia Carnatica*. In this series of 12 volumes, the inscriptions of each district were normally accomodated in one volume. One volume was set apart for the inscriptions of Shravanabelagola (2). Two volumes each (3-4 and 7-8) were set apart for the inscriptions of Mysore, which then included Mandya also within its range, and those of Shimoga. R. Narasimhacharya, who succeeded B. L. Rice, brought to light in the course of his tenure of 16 years nearly 5000 inscriptions. He started publishing the important inscriptions in the Annual Reports. The second volume of *Epigraphia Carnatica* (Sravanabelagola) was thoroughly revised by him and a new edition of it was brought out in 1923. The Department of Archaeology was under the jurisdiction of the University of Mysore between 1922 and 1944. The curator of the Oriental Library used to officiate as a part-time Director. Later, though it became a department under the Government, the Professor and Head of the Department of History, Ancient Indian History and Archaeology of the University of Mysore continued to officiate as Ex-officio Directors. The department has been carrying on the survey of inscriptions, as a result of which new inscriptions are being brought to light year after year.

The volumes of *Epigraphia Carnatica* had run out of stock during the last few decades. Since they are essential source books to the students and the scholars alike, there was a long felt need for a revised edition. When the Co-ordination Committee for Research work on Karnataka Life and Culture, met on 24th January 1970, under the Chairmanship of Shri K. V. Shankara Gowda, the then Minister for Education, Government of Mysore, a suggestion regarding the revision and re-print of the *Epigraphia Carnatica* was made by the Director of the Institute of Kannada Studies. He even suggested that the Institute was prepared to shoulder the responsibility. All the members of the Committee supported him and welcomed the proposal. The Committee resolved to request the Institute of Kannada Studies to work out the details of the scheme, to recommend to the State Government to provide funds for the implementation of the scheme, and to entrust the scheme to the Institute of Kannada Studies.

A meeting of experts in the field was convened by the Director of the Institute of Kannada Studies on March 7, 1970 to discuss the details of the scheme. Dr. M. Seshadri, Dr. G. S. Gai, and Dr. A. V. Narasimha Murthy participated in the meeting. A scheme, costing about Rs. 12.5 lakhs for the revision and reprint of *Epigraphia Carnatica* was worked out in the meeting. The scheme was presented by the Director of the Institute of Kannada Studies to the Government

through the University of Mysore on 4-4-1970. Though the government was pleased to pass orders approving the scheme on 16-3-71, overcoming all the technical difficulties it was possible to put the scheme into operation only by 16th December 1971. An Advisory Committee, with the Director, Institute of Kannada Studies, as the Chairman, was constituted by the University to guide the Institute in the implementation of the scheme. The committee consists of the Director, Department of Archaeology, Mysore, the Chief Epigraphist to Government of India, and a few scholars from the Universities of Mysore, Bangalore, Karnatak and Madras. This committee met for the first time on 24-12-1971 and discussed in detail the *modus operandi* of the revision of *Epigraphia Carnatica*; broad guidelines were also set out. Some of the important decisions of the committee were as follows: Roman transliteration of the texts of the Kannada inscriptions need not be given; texts of the non-Kannada inscriptions should be provided in Kannada script along with their Roman transliteration; inscriptions published at different sources should be brought together; every inscription should be preceded by a short introductory note; necessary, useful indices should be included; introduction, texts and translations should be revised on the basis of authentic evidences.

In accordance with the suggestions of the Advisory Committee, revision of the volumes of *Epigraphia Carnatica* has been undertaken and the first volume so revised is being now brought out. This volume contains the inscriptions of the Coorg District. B. L. Rice published this volume in 1886 as the first in the series of the volumes of *Epigraphia Carnatica* comprising 23 inscriptions of Coorg, with their translation and transliteration. When the *Gazetteer of Coorg* had to be prepared for the *New Imperial Gazetteer of India*, Rice felt the need for a fresh survey. The new inscriptions which came to light as a result of this endeavour were incorporated in the appendices to the volumes of *Epigraphia Carnatica* relating to Bangalore and Tumkur (9 and 12-First Edition). All these inscriptions were put together in the revised edition of the *Coorg Inscriptions* which Rice brought out in 1914. The number of inscriptions included in the revised edition was 75. This volume has again been revised according to the scheme of revision and re-print of the volumes of *Epigraphia Carnatica*. In order to compare the texts of the published inscriptions with those of the originals, two survey tours have been undertaken. Many of the inscriptions have been compared with the originals and corrections have been effected, wherever necessary. Only in cases where the original inscriptions were not available, the texts have been retained as such. Inscription No. 72 of the previous edition, which was in an undecipherable condition has been omitted. One of the special features of the present volume is that it includes 32 new inscriptions which had, as yet, not seen the light of the day. Of course, it is true that, our scheme does not contemplate any search for fresh inscriptions. We have included all those inscriptions which were secured without much effort on our part. This shows how much more work still remains to be done in this direction. Undoubtedly, there is a need for a new comprehensive survey. This work has to be accomplished before these inscriptions, still in oblivion, finally disappear from the scene.

A comparison with the previous edition will bring out a few more special features. A new introduction replaces the old one written by Rice; an introductory note preceeds every inscription; to satisfy the modern requirements, a few indices have been included. All this has been done in accordance with the suggestions of the Advisory Committee.

As far as works of this type are concerned, revision cannot, however, be final. Individuals and institutions, both have their own limitations. Whatever be the revision, it is undertaken by a few; and their work cannot be isolated from the view-point, attitudes, studies and research, all their own. It is quite natural that others may have their own views and attitudes. Hence, in this great endeavour suggestions and proposals of scholars interested in such works are

welcome. This is a work of the entire country, and so is the responsibility too. In a way, the first volume is also a model volume. We hope that the revision aspect of the forthcoming volumes will be improved in the light of the criticisms to be offered with regard to the revision and display of the present volume. A few errors have crept in inspite of our best care. An errata is appended at the end. Readers are requested to kindly refer to this.

* * * * * *

This scheme has come into being with the generous help of the Government of Mysore and its love of culture. But for the personal interest of Sri Veerendra Patil, Sri K. V. Shankara Gowda and Sri Ramakrishna Hegde, the then Chief, Education and Finance Ministers respectively, this great scheme could not have obtained the approval of the Government so easily. This is one of those ambitious schemes which these three eminent men undertook out of their love of language and literature and their farsightedness. I am very happy to remember them now with gratitude. We are gratefully indebted to the present government which has evinced interest in not only continuing such schemes of the erst-while Government but in launching new schemes also. Several decisions taken by the Government under the dynamic leadership of the Chief Minister, Sri Devaraj Urs, are of unique importance from the point of view of the development of Kannada language, literature and culture. The people of Karnataka are extremely happy to note that the Finance Minister, Sri M. Y. Ghorpade and the Education Minister, Sri A. R. Badrinarayan, are evincing special interest in such matters. This government which has taken far-reaching decisions capable of changing the very history of the state, will no doubt shape its future gloriously. Sri K. R. Ramachandran, who was formerly the Secretary for Education, and Sri Samuel Appaji, the present Secretay for Education, have fully co-operated in the revision and reprint scheme of the *Epigraphia Carnatica*. Sri S. R. Rao of the Archæological Survey of India, lent enthusiastic support to the scheme, when I placed the scheme for the first time before the committee. Dr. A V. Narasimha Murthy, Head of the Department of Ancient History and Archæology, has helped me from the beginning in the implementation of the scheme. In a way, he himself pioneered this scheme. It is a matter of deep regret that Dr. M. Seshadri, who was the Head of the Department of Ancient Indian History and Archæology and was guiding me in many respects passed away before the publication of the first volume. Dr. G. S. Gai, Chief Epigraphist to the Government of India, and his colleagues have helped me at every step with their valuable advice. Dr. Gai and Dr. K. V. Ramesh have helped me with solutions whenever I was confronted with problems. They have gone through some of the portions of this volume. It is a matter of good fortune for a scheme of this type to be able to utilise the services of such eminent scholars. The members of the Advisory Committee have helped me with their expert guidance marked by experience and scholarship. The Director of the University Press. Sri H. Narasanna, and his staff have extended their full co-operation in printing this work, which is none too easy a task. Sri K. R. Sunderraj, Photographer of the Institute of Kannada Studies, has evinced keen interest in making this volume illustrative. The officials of the University and my collegues in the various sections of the Institute have co-operated with me and lightened the burden of my responsibility. The Director General of the Archælogical Survey of India has kindly permitted us to bring out a revised edition of this volume. My thanks are due to all of them.

A special reference to Prof. D. Javare Gowda, Vice-Chancellor of our University, is necessary in this connection. He has been a tower of strength to me in carrying on the activities of the Institute of Kannada Studies, and in the implementation of this scheme since its very inception. But for his support and assurance, I would not have come forward to shoulder the responsibility of a big scheme as this. He has evinced in this scheme also the same love and

enthusiasm characteristic of him in respect of the developmental activities of the University and those relating to Kannada. I remember him with whole hearted gratitude.

Success in schemes of this type largely depends on the colleagues who share the responsibility. It is difficult to secure the services of experts in such technical subjects as Epigraphy. Fortunately, this scheme of the revision and re-print of *Epigraphia Carnatica* has been able to enlist the services of experts and competent scholars in the field. I am extremely happy about it. Sri M. Hanumantha Rao began his work on this scheme in the capacity of an Assistant Epigraphist. He was formerly the Assistant Director in the Department of Archæology, Government of Mysore, where he has spent many years of his life amidst inscriptions. Two of the young scholars, Sri H. M. Nagaraja Rao and Sri Sitaram Jagirdar, have joined us as Epigraphical Assistants. Only very recently could we secure the services of Dr. B. R. Gopal as an Epigraphist. Dr. Gopal has served in the Epigraphical Branch of the Archæological Survey of India and the Karnatak University for several years. He has published several books and articles and has also edited volumes of inscriptions. With the assistance of these scholars, I am confident that the scheme could be completed during the next four or five years. Most of the work relating to the present volume has been done by Sri Hanumantha Rao. He has finally revised the texts and has prepared the notes. He had prepared the first drafts of the introduction and the translations, which have been revised and given a final shape by Dr. Gopal. All these colleagues have shared this responsibility with great faith and pride. I am sure that their sincerity, devotion and industriousness will be duly appreciated by the Kannadigas. I always feel happy to refer to them.

I once again thank all those who have directly or indirectly participated in this great endeavour.*

Institute of Kannada Studies, Mysore
August 1, 1972

**H. M. Nayak**
*Director*

*Translated from original Kannada by Sri Pradhan Gurudatta

ಪರಿವಿಡಿ

# CONTENTS

## ಚಿತ್ರಗಳ ಪಟ್ಟಿ

## LIST OF ILLUSTRATIONS

## ಬೆಂಜಮಿನ್ ಲೂಯಿ ರೈಸ್

ಪ್ರಾಚ್ಯವಿದ್ಯೆಯ ಹಿರಿಯ ವಿದ್ವಾಂಸರಲ್ಲೊಬ್ಬರಾಗಿದ್ದ ಬೆಂಜಮಿನ್ ಲೂಯಿ ರೈಸ್ ಅವರು ಹುಟ್ಟಿದುದು 1837ರ ಜುಲೈ 17ರಂದು. ಇಂಗ್ಲೆಂಡಿನಲ್ಲಿ ಅವರು ತಮ್ಮ ವಿದ್ಯಾಭ್ಯಾಸವನ್ನು ಪೂರೈಸಿದ ಮೇಲೆ ಕೆಲಕಾಲ ಕೆಲಸದಲ್ಲಿದ್ದು, 1860 ರಲ್ಲಿ ಈ ದೇಶಕ್ಕೆ ಬಂದು ಬೆಂಗಳೂರಿನ ಸೆಂಟ್ರಲ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾದರು. 1865ರಿಂದ 1868ರವರೆಗೆ ಮೈಸೂರು ಮತ್ತು ಕೊಡಗು ಸೀಮೆಗಳ ಶಾಲಾಇನ್ಸ್ಪೆಕ್ಟರಾಗಿದ್ದು, ಅನಂತರ 1868ರಲ್ಲಿ ವಿದ್ಯಾಭ್ಯಾಸದ ಇಲಾಖೆಯ ಮುಖ್ಯಾಧಿಕಾರಿಯಾಗಿ ನೇಮಕಗೊಂಡರು. 1883ರ ವರೆಗೂ ಈ ಹುದ್ದೆಯಲ್ಲಿ ಮುಂದುವರೆದ ಅವರು ಆ ನಡುವೆ 1882ರಲ್ಲಿ ಹಂಟರ್ ವಿದ್ಯಾಸಮಿತಿಯ ಕಾರ್ಯದರ್ಶಿಯಾಗಿಯೂ ಕೆಲಸಮಾಡಿದರು. ಮೈಸೂರು ಸರ್ಕಾರವು 1884ರಲ್ಲಿ ಪುರಾತತ್ವ ಇಲಾಖೆಯನ್ನು ಆರಂಭಿಸಿದಾಗ ತಮ್ಮ ವಿದ್ಯಾಶಾಖೆಯ ಕೆಲಸದ ಜೊತೆಗೆ ಆ ಇಲಾಖೆಯ ಜವಾಬ್ದಾರಿಯನ್ನೂ ವಹಿಸಿಕೊಂಡರು. ಪ್ರಾಚ್ಯಸಂಶೋಧನೆಯ ಪ್ರಾಮುಖ್ಯವನ್ನು ಮನಗಂಡ ಸರ್ಕಾರವು 1890ರಲ್ಲಿ ರೈಸ್ ಅವರನ್ನು ಪುರಾತತ್ವ ಇಲಾಖೆಯ ಪೂರ್ಣಕಾಲದ ನಿರ್ದೇಶಕರನ್ನಾಗಿ ನೇಮಿಸಿತು. ಈ ಹುದ್ದೆಯಲ್ಲಿ ಅವರು 1906ರ ವರೆಗೂ ಇದ್ದು 22 ವರ್ಷಗಳ ಕಾಲ ಆ ಇಲಾಖೆಗೆ ಮಹತ್ತರವಾದ ಸೇವೆ ಸಲ್ಲಿಸಿ ತಮ್ಮ 70ನೇ ವಯಸ್ಸಿನಲ್ಲಿ ನಿವೃತ್ತರಾದರು.

ರೈಸ್ ಅವರು ಚಿಕ್ಕವಯಸ್ಸಿನಲ್ಲಿಯೇ ಈ ದೇಶದ ಹಲವು ಭಾಷೆಗಳಲ್ಲಿ ಪಾಂಡಿತ್ಯವನ್ನು ಪಡೆದು ಈ ದೇಶವನ್ನು, ಇಲ್ಲಿನ ಜನಗಳನ್ನು ಚೆನ್ನಾಗಿ ಅರಿತವರಾಗಿದ್ದರು. ಶಾಲಾ ಇನ್ಸ್ಪೆಕ್ಟರಾಗಿದ್ದಾಗಲೂ, ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದಾಗಲೂ ಮಾಡಿದ ಪ್ರವಾಸಗಳಿಂದ ಇಲ್ಲಿನ ನಾನಾ ಭಾಗಗಳನ್ನು ಕಣ್ಣಾರೆ ಕಂಡು ಅವುಗಳ ಪರಿಚಯ ಮಾಡಿಕೊಂಡಿದ್ದರು. ಜೊತೆಗೆ ಅಲ್ಲಲ್ಲಿ ದೊರೆತ ಓಲೆಗರಿಗಳು, ಹಸ್ತ ಪ್ರತಿಗಳು, ಸ್ಥಳಪುರಾಣ, ಚರಿತ್ರೆಗಳನ್ನು ಕಲೆಹಾಕಿದ್ದರು. ಇದರಿಂದ ಅವರಿಗೆ ಸುಪ್ರಸಿದ್ಧವಾದ ಮೈಸೂರು ಗೆಜೆಟಿಯರಿನ ಎರಡು ಸಂಪುಟಗಳನ್ನು ಬರೆಯಲು ಒಳ್ಳೆಯ ಸಾಧನ ಸಂಪತ್ತು ದೊರೆಯಿತು. ಈ ಸಂಪುಟಗಳನ್ನು 1877–78ರಲ್ಲಿ ಪ್ರಕಟಿಸಿದುದಲ್ಲದೆ ಮತ್ತೆ 1897ರಲ್ಲಿ ಪರಿಷ್ಕರಿಸಿದರು. 1881ರಲ್ಲಿ ನಡೆದ ಮೈಸೂರು ದೇಶದ ಮೊದಲನೆಯ ಜನಗಣತಿಯ ವರದಿಯನ್ನೂ ಇವರು ಸಿದ್ಧಪಡಿಸಿದರು.

ಊರುಗಳ ಮುಂದೆ, ದೇವಾಲಯಗಳ ಬಳಿ ನಿಂತಿರುವ ಶಾಸನಗಳು ರೈಸ್ ಅವರ ಗಮನ ಸೆಳೆದುದು ಸ್ವಾಭಾವಿಕ. ಶಾಸನಗಳನ್ನು ಸ್ವಪ್ರಯತ್ನದಿಂದ ಓದಿ ಅವುಗಳಿಗೆ ಟಿಪ್ಪಣಿ ಬರೆಯುವ ಹವ್ಯಾಸ ಬೆಳೆಸಿಕೊಂಡರು. ಬರ್ಗೆಸ್ ಅವರು 1876ರಲ್ಲಿ 'ಇಂಡಿಯನ್ ಆ್ಯಂಟಿಕ್ವ್ಯಅರಿ' ಎಂಬ ಪತ್ರಿಕೆಯನ್ನು ಆರಂಭಿಸಿದಾಗ ಅದರ ಮೊದಲ ಸಂಪುಟದಲ್ಲಿಯೇ ರೈಸ್ ಅವರು ಮಡಿಕೇರಿ ತಾಮ್ರಶಾಸನದ ಬಗ್ಗೆ ಲೇಖನವನ್ನು ಪ್ರಕಟಿಸಿದರು. 1879ರಲ್ಲಿ ಅವರ 'ಮೈಸೂರ್ ಇನ್ಸ್ಕ್ರಿಪ್ಷನ್ಸ್' ಎಂಬ ಗ್ರಂಥ ಪ್ರಕಟವಾಯಿತು. ಮೈಸೂರು ದೇಶದ ಬೇರೆ ಬೇರೆ ಭಾಗಗಳಲ್ಲಿ ದೊರೆತ ಹಲವು ಶಾಸನಗಳ ಇಂಗ್ಲಿಷ್ ಅನುವಾದಗಳನ್ನು ಅದರಲ್ಲಿ ಕೊಟ್ಟರು.

ಪುರಾತತ್ವ ಇಲಾಖೆಯ ಅಧಿಕಾರವನ್ನು ವಹಿಸಿಕೊಂಡ ಕೂಡಲೇ ಎಪಿಗ್ರಾಫಿಯ ಕರ್ನಾಟಕ ಗ್ರಂಥಮಾಲೆಯನ್ನು ಆರಂಭಿಸಿ ಶಾಸನ ಸಂಪುಟಗಳನ್ನು ಪ್ರಕಟಿಸಲಾರಂಭಿಸಿದರು. 1886ರಲ್ಲಿ ಈ ಗ್ರಂಥಮಾಲೆಯ ಮೊದಲನೆಯ ಸಂಪುಟ 'ಕೊಡಗಿನ ಶಾಸನಗಳು' ಹೊರಬಂದಿತು. ಶ್ರವಣಬೆಳಗೊಳದಲ್ಲಿ ದೊರೆತ ಶಾಸನಗಳನ್ನು ಒಟ್ಟುಗೂಡಿಸಿ 1889ರಲ್ಲಿ 'ಶ್ರವಣಬೆಳಗೊಳದ ಶಾಸನಗಳು' ಎಂಬ ಎರಡನೇ ಸಂಪುಟವನ್ನು ರೈಸ್ ಅವರು ಪ್ರಕಟಿಸಿದರು.

1890ರಲ್ಲಿ ಪೂರ್ಣಕಾಲದ ನಿರ್ದೇಶಕರಾಗಿ ಪುರಾತತ್ವ ಇಲಾಖೆಯ ಆಡಳಿತವನ್ನು ವಹಿಸಿಕೊಂಡಮೇಲೆ ಪ್ರಾಚ್ಯ ವಸ್ತುಗಳ ಅನ್ವೇಷಣಾ ಕಾರ್ಯವನ್ನು ಕ್ರಮಬದ್ಧವಾಗಿ ನಡೆಸಲು ರೈಸ್ ಅವರಿಗೆ ಅವಕಾಶ ದೊರೆಯಿತು. ಉತ್ಸಾಹ ಮತ್ತು ಕಾರ್ಯಶಕ್ತಿಗಳು ತುಂಬಿದ್ದ ಈ ಘನವಿದ್ವಾಂಸರು ದೇಶದ ಎಲ್ಲ ಭಾಗಗಳಲ್ಲಿಯೂ ಸುತ್ತಿ ಸಹಸ್ರಾರು ಶಾಸನಗಳನ್ನು ಸಂಗ್ರಹಿಸಿದರು. ಅವರು ಈ ಅಧಿಕಾರದಲ್ಲಿದ್ದ 16 ವರ್ಷಗಳಲ್ಲಿ ಎಪಿಗ್ರಾಫಿಯ ಕರ್ನಾಟಕದ ಉಳಿದ ಹತ್ತು ಬೃಹತ್ಸಂಪುಟಗಳನ್ನು ಪ್ರಕಟಿಸಿದರು. ಒಂದೊಂದು ಸಂಪುಟವೂ ಸಾಮಾನ್ಯವಾಗಿ ಒಂದೊಂದು ಜಿಲ್ಲೆಯಲ್ಲಿ ದೊರೆತ ಶಾಸನಗಳನ್ನೊಳಗೊಂಡಿವೆ. ಶಿವಮೊಗ್ಗ ಜಿಲ್ಲೆಯ ಶಾಸನಗಳು ಮಾತ್ರ ಎರಡು ಸಂಪುಟಗಳಲ್ಲಿವೆ.

ಈ ಹನ್ನೆರಡು ಸಂಪುಟಗಳಲ್ಲಿ ರೈಸ್ ಅವರು ಸಂಗ್ರಹಿಸಿ ಪ್ರಕಟಪಡಿಸಿರುವ ಶಾಸನಗಳ ಒಟ್ಟು ಸಂಖ್ಯೆ 8869. ಕರ್ನಾಟಕದ ಚರಿತ್ರೆಯನ್ನು ಅರಿಯುವುದಕ್ಕೆ ಈ ಶಾಸನಗಳಲ್ಲಿ ಅನೇಕವು ಅತ್ಯಮೂಲ್ಯವಾದುವು. ಈ ದೇಶದ ಚರಿತ್ರೆಯನ್ನು ಬರೆಯಲಂತೂ ಈ ಶಾಸನಗಳ ನೆರವು ಅತ್ಯಗತ್ಯ. ರೈಸ್ ಅವರು ಕಂಡುಹಿಡಿದ ಈ ಶಾಸನಗಳು ಕರ್ನಾಟಕದ ಚರಿತ್ರೆಯನ್ನು ಕ್ರಿ. ಪೂ. 3ನೇ ಶತಮಾನದಷ್ಟು ಹಿಂದಕ್ಕೆ ಒಯ್ದವು. ಈ ಎಲ್ಲ ಶಾಸನಗಳಿಂದ ತಿಳಿದುಬರುವ ರಾಜಕೀಯ ಚರಿತ್ರೆಯ ತಿರುಳನ್ನು ರೈಸ್ ಅವರು 'ಮೈಸೂರು ಅಂಡ್ ಕೂರ್ಗ್ ಫ್ರಮ್ ಇನ್ಸ್ಕ್ರಿಪ್ಷನ್ಸ್' ಎಂಬ ಗ್ರಂಥದಲ್ಲಿ ಒದಗಿಸಿದ್ದಾರೆ.

ಶಾಸನಗಳ ಸಂಗ್ರಹಣೆಯ ಜೊತೆಯಲ್ಲಿಯೇ ಪ್ರಾಚೀನ ಓಲೆಗರಿ, ಹಸ್ತಪ್ರತಿ ಗ್ರಂಥಗಳನ್ನೂ ಇವರು ಸಂಗ್ರಹಿಸಿದರು. ಈ ಗ್ರಂಥಗಳನ್ನು ಶೇಖರಿಸಿಟ್ಟು ಅವುಗಳನ್ನು ವ್ಯಾಸಂಗಮಾಡುವುದಕ್ಕಾಗಿಯೇ ಓರಿಯಂಟಲ್ ಲೈಬ್ರರಿಯು ಆರಂಭವಾಯಿತು. 1884ರಲ್ಲಿಯೇ 'ಬಿಬ್ಲಿಯೋಥಿಕಾ ಕರ್ನಾಟಿಕ' ಗ್ರಂಥಮಾಲೆಯನ್ನೂ ಇವರು ಆರಂಭಿಸಿದರು. ಈ ಮಾಲೆಯಲ್ಲಿ ಕರ್ಣಾಟಕ ಭಾಷಾಭೂಷಣ, ಕರ್ಣಾಟಕ ಶಬ್ದಾನುಶಾಸನ, ಪಂಪರಾಮಾಯಣ, ಪಂಪಭಾರತ, ಕವಿರಾಜಮಾರ್ಗ ಮತ್ತು ಕಾವ್ಯಾವಲೋಕನಗಳೆಂಬ ಅತ್ಯಮೂಲ್ಯವಾದ ಪ್ರಾಚೀನ ಗ್ರಂಥಗಳನ್ನು ಪ್ರಕಟಿಸಿದರು.

ಕೆಲಸದಿಂದ ನಿವೃತ್ತರಾದ ಮೇಲೆ ಭಾರತವನ್ನು ಬಿಟ್ಟು ಸ್ವದೇಶಕ್ಕೆ ತೆರಳಿ ಹ್ಯಾರೋ ನಗರದಲ್ಲಿ ನೆಲಸಿದರು. ಅಲ್ಲಿಂದಲೂ ಅವರು ಕರ್ನಾಟಕಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ಕುರಿತು ಲೇಖನಗಳನ್ನು ಬರೆಯುವುದನ್ನು ಮುಂದುವರೆಸಿದ್ದರು. 1914ರಲ್ಲಿ ಭಾರತ ಸರ್ಕಾರಕ್ಕಾಗಿ ಎಪಿಗ್ರಾಫಿಯ ಕರ್ನಾಟಿಕದ ಮೊದಲನೆಯ ಸಂಪುಟದ ಪರಿಷ್ಕೃತ ಆವೃತ್ತಿಯನ್ನು ಸಿದ್ಧಪಡಿಸಿದರು. 1927ರ ಜುಲೈ 10ರಂದು ತೊಂಬತ್ತರ ತುಂಬು ವಯಸ್ಸಿನಲ್ಲಿ ಅವರು ತೀರಿಕೊಂಡರು. ಎಲ್. ಡಿ. ಬಾರ್ನೆಟ್ ಅವರ ಮಾತುಗಳಲ್ಲಿ ಹೇಳುವುದಾದರೆ "ಅವಿಶ್ರಾಂತ ದುಡಿಮೆ, ಅನಂತವಾದ ಅಭ್ಯಾಸ, ಸತ್ಯಾನ್ವೇಷಣೆಗಾಗಿ ಮನಃಪೂರ್ವಕವಾದ ಅರ್ಪಣೆ, ಇವುಗಳಿಂದ ರೈಸ್ ಅವರು ದಕ್ಷಿಣ ಭಾರತದ ಚರಿತ್ರೆ, ಸಾಹಿತ್ಯಗಳ ಅಭ್ಯಾಸಕ್ಕೆ ಉತ್ತೇಜನವನ್ನು ಕೊಟ್ಟು ಜ್ಞಾನಾರ್ಜನೆಗೆ ಅಮೂಲ್ಯವಾದ ಸೇವೆ ಸಲ್ಲಿಸಿದ್ದಾರೆ."

## BENJAMIN LEWIS RICE

Benjamin Lewis Rice, one of the great European orientalists, was born on July 17, 1837. After completing his education in England he served there for a few years. Then he came to Bangalore in 1860, and was appointed as the Head-master of the Central High School. He was the Inspector of Schools in Mysore and Coorg between 1865 and 1868. In 1868 he became the Director of Public Instruction in Mysore State which position he held till 1883. He was also the Secretary to the Hunter's Committee in 1882. In 1883 he became the Secretary to the Government, Education Department. When the Department of Archæology was established in the Mysore State in 1884 he was appointed part-time Director of Archæological Researches, in addition to his duties as the Secretary. Finally, in the year 1890, Government of Mysore recognising the value of the archæological researches, appointed Rice as the full-time Director of the Department. He continued in this position till 1906. After 22 years of strenuous and valuable service, at the age of 70 he retired from Government Service.

Rice acquainted himself with this country, its people and language at a very early age. His extensive tours in the State both as Inspector of Schools and as Director of Public Instruction enabled him to acquire a first-hand knowledge of the then Mysore State. He also collected a large number of manuscripts, local traditions and historical records. His experience and collection of these materials enabled him to edit his two famous volumes of the Mysore Gazetteer, first published in 1877–78 and again revised in 1897, in such a comprehensive manner. It was he who prepared the first Census Report of the Mysore State in 1881.

Inscriptions which were prominently visible in front of the villages or near temples naturally attracted the attention of Rice. He began to study these inscriptions as a hobby and published research articles. In the very first volume of Indian Antiquary, started in 1876 by Burgess, Rice's article on Mercara copper plate records appeared. In 1879 his 'Mysore Inscriptions' was published. In it he gave translations of many inscriptions discovered at various places in the State.

Immediately after taking charge of the Department of Archæology he began the publication of the series entitled Epigraphia Carnatica and issued Volume I "Coorg Inscriptions" in 1886. His next volume was "Inscriptions at Sravanabelgola", published in 1889.

When he took over the Department of Archæology as a full-time Director in 1890, systematic survey for the materials of archæological interest became possible. An enthusiastic organiser and a zealous scholar, Rice toured all parts of the Mysore State and collected thousands of inscriptions. In the course of sixteen years of his directorship he brought out ten more large Volumes of Epigraphia Carnatica. Each volume generally consists of the inscriptions discovered in a District. Shimoga District, however, is represented in two volumes.

Total number of inscriptions he published in these twelve volumes is 8869. Most of them are of great value in elucidating the history of Karnataka. These inscriptions form an indispensible source of information for the study of the history and culture of Karnataka. Epigraphical discoveries made by Rice enabled him to trace the history of Karnataka back to the 3rd century B.C. The results of these collections were summarised by Rice in a separate volume entitled Mysore and Coorg from Inscriptions.

Side by side, he also collected thousands of manuscripts. These were deposited in the Mysore Government Oriental Library which was established for this purpose. In 1884 he also initiated the series entitled Bibliotheca Carnatica in which he brought out a few highly important Kannada classical works, viz. Karnataka-Bhasha-Bhushana, Karnataka-Sabdanusasana, Pampa-Ramayana, Pampa-Bharata, Kavirajamarga and Kavyavalokana.




After retirement he left India and settled at Harrow. Even from there he continued to contribute on various subjects pertaining to Karnataka and prepared the revised edition of the Epigraphia Carnatica, Volume I for the Government of India which was published in 1914. He died on the 10 of July 1927 at the ripe age of ninety.

L. D. Barnett writes about him 'A man of untiring industry, wide learning and earnest devotion to the pursuit of truth, he has rendered exceedingly great services to the cause of knowledge by the stimulus which he has given to historical and literary studies in South India'.





## ಶಾಸನಗಳು ದೊರೆತಿರುವ ಊರುಗಳ ಅಕಾರಾದಿ

| ಊರು | ಶಾಸನ ಸಂಖ್ಯೆ | ಊರು | ಶಾಸನ ಸಂಖ್ಯೆ |
|---|---|---|---|
| ಅಂಜನಗಿರಿ | 19 | ನಿಡುತ | 84–86 |
| ಅಂದಗೋವೆಕಲ್ಲೂರು | 37 | ಪಾಡಿ | 26,27 |
| ಅಬ್ಬಿಮಠ | 63 | ಪಾಲೂರು | 20 |
| ಆಡಿನಾಡೂರು | 45 | ಪೆಗ್ಗೂರು | 98 |
| ಇಗ್ಗೋಡ್ಲು | 33 | ಬಾಳೆಲೆ | 102 |
| ಇರ್ಪಿ | 106 | ಬಿಳಿಯೂರು | 96 |
| ಉಲುಗುಲಿ | 95 | ಭಾಗಮಂಡಲ | 21–24 |
| ಕಟ್ಟೆಪುರ | 28 | ಮಡಿಕೇರಿ | 1–18 |
| ಕಲಕಂದೂರು | 58,59 | ಮಯಮುಡಿ | 105 |
| ಕಾಜೂರು | 92 | ಮಾದಾಪುರ | 29–32 |
| ಕಿಬ್ಬೆಟ್ಟ | 34 | ಮಾಲಂಬಿ | 65,66 |
| ಕುಂದ | 99 | ಮುಳ್ಳೂರು | 68-83 |
| ಕೊತೂರು | 97 | ಮೂದರವಳ್ಳಿ | 94 |
| ಗಣಗೂರು | 52–57 | ಮೆಣಸ | 67 |
| ಗರಗಂದೂರು | 91 | ಮೋರಿಕಲ್ಲು | 46,47 |
| ಗೋಣಿಮರೂರು | 50,51 | ಯೆಡೂರು | 62 |
| ಚೇರಲಸಿರಿಮಂಗಲ | 35 | ಸಿರಹ | 93 |
| ಚೌಡ್ಲು | 60,61 | ಸಿರಂಗಾಲ | 38 |
| ತಲಕಾವೇರಿ | 25 | ಹರದೂರು | 64 |
| ತಾಕೇರಿ | 44 | ಹಾರಂಗಿ | 43 |
| ದನಗಲ್ಲು | 103,104 | ಹಾರೋಹಳ್ಳಿ | 90 |
| ದೊಡ್ಡಕಣಗಾಲ | 89 | ಹುಲಕೋಡು | 39 |
| ದೊಡ್ಡಮಳತೆ | 88 | ಹೆಗ್ಗಡಹಳ್ಳಿ | 40–42 |
| ನಂದಿಗುಂದ | 87 | ಹೆರೂರು | 36 |
| ನಲ್ಲೂರು | 100,101 | ಹೊಸಹಳ್ಳಿ | 48,49 |





## INDEX OF VILLAGES WHERE INSCRIPTIONS WERE FOUND

## ವಂಶಾನುಕ್ರಮದಲ್ಲಿ

### ಶಾಸನಗಳ ಸೂಚಿ

| ಅರಸನ ಹೆಸರು | ಶಾಸನ ಕಾಲ (ಕ್ರಿಸ್ತಶಕ) | ಶಾಸನದ ಸಂಖ್ಯೆ |
|---|---|---|
| | ಗಂಗ | |
| ಅವಿನೀತ | 466 | 1 |
| ರಾಚಮಲ್ಲ II | 888 | 96 |
| ,, | — | 97 |
| ರಾಚಮಲ್ಲ IV | 978 | 98 |
| ಎಱೆಯಪ್ಪ | 10ನೆಯ ಶತಮಾನ | 64 |
| ಕೊಂಗುಣಿವರ್ಮ್ಮ (?) | ,, | 90 |
| | ಬಾಣ (?) | |
| ದುದ್ದರಸ | 1095 | 62 |
| | ಕೊಂಗಾಳ್ವ | |
| ಮಣಿಜ (?) | 11ನೆಯ ಶತಮಾನ | 65 |
| ಕೊಂಗಾಳ್ವ (?) | ,, | 67 |
| ರಾಜೇಂದ್ರಚೋಳ | 1058 | 72 |
| ರಾಜಾಧಿರಾಜ II | 11ನೆಯ ಶತಮಾನ | 68–70 |
| ರಾಜೇಂದ್ರ ಪೃಥ್ವೀ | 1070 | 48, 49 |
| ರಾಜೇಂದ್ರಚೋಳ | 1077 | 81 |
| ,, | 11ನೆಯ ಶತಮಾನ | 73 |
| ವೀರಚೋಳ | 1175 | 53, 87 |
| | ಚಂಗಾಳ್ವ | |
| ತ್ರಿಭುವನಮಲ್ಲವೀರ . . | 12ನೆಯ ಶತಮಾನ | 91 |
| ಮುನಿವರಾದಿತ್ಯ (?) | 13ನೆಯ ಶತಮಾನ | 36 |
| ಮಲ್ಲಿದೇವ } ಹರಿಹರದೇವ | ,, | 50, 51 |
| ಹರಿಹರದೇವ | 1296 | 80 |
| ,, | 13ನೆಯ ಶತಮಾನ | 60 |
| ಶ್ರೀಕಂಠರಸ | 1544 | 35 |
| | ಹೊಯ್ಸಳ | |
| ವೀರಬಲ್ಲಾಳ II | 1175 | 93 |
| ,, (?) | 12ನೆಯ ಶತಮಾನ | 42 |
| ನರಸಿಂಹ III | 1255 | 85 |
| ,, | 1285 | 86 |
| | ವಿಜಯನಗರ | |
| ಹರಿಹರ II | 1390 | 75 |
| | ಬೇಲೂರ ನಾಯಕರು | |
| ಕೃಷ್ಣಪ್ಪನಾಯಕ IV | 1693 | 28 |
| ಕೃಷ್ಣಪ್ಪನಾಯಕ V | 1756 | 66 |
| ,, | 18ನೆಯ ಶತಮಾನ | 94 |
| | ಕೊಡಗಿನ ರಾಜರು | |
| ವೀರಪ್ಪವಡೆಯ | 1731 | 40 |

# DYNASTIC INDEX

| King | Date (in A.D.) | No. |
|---|---|---|
| | **GANGA** | |
| Avinīta | 466 | 1 |
| Rāchamalla II | 888 | 96 |
| ,, | — | 97 |
| Rāchamalla IV | 978 | 98 |
| Eṟeyappa | 10th century | 64 |
| Konguṇivarma (?) | 10th century | 90 |
| | **BANA (?)** | |
| Duddarasa | 1095 | 62 |
| | **KONGALVA** | |
| Manija (?) | 11th century | 65 |
| Koṅgāḷva (?) | ,, | 67 |
| Rājēndrachōḷa | 1058 | 72 |
| [Rajādhirāja II] | 11th century | 68–70 |
| Rājēndra Prithvi | 1070 | 48, 49 |
| Rajendrachola | 1077 | 81 |
| ,, | 11th century | 73 |
| Vīrachola | 1175 | 53, 87 |
| | **CHANGALVA** | |
| Tribhuvanamalla Vīra .. | 12th century | 91 |
| Munivarāditya (?) | 13th century | 36 |
| Mallideva, Hariharadeva | 13th century | 50, 51 |
| Hariharadēva | 1296 | 80 |
| ,, | 13th century | 60 |
| Srīkaṇṭharasa | 1544 | 35 |
| | **HOYSALA** | |
| Vīra Ballāḷa II | 1175 | 93 |
| ,, (?) | 12 century | 42 |
| Narasimha III | 1255 | 85 |
| ,, | 1285 | 86 |
| | **VIJAYANAGARA** | |
| Harihara II | 1390 | 75 |
| | **BELUR CHIEFS** | |
| Kṛishṇappanāyaka IV | 1693 | 28 |
| Krishṇappanāyaka V | 1756 | 66 |
| ,, | 18th century | 94 |

| King | Date (in A. D.) | No. |
|---|---|---|
| | **RAJAS OF COORG** | |
| Vīraypa Vaḍeya | 1731 | 40 |
| Vīrarajēndra Vaḍeyar I | 1782 | 29, 31 |
| ,, | 1792 | 32 |
| ,, | 1796 | 63 |
| ,, | 1797 | 22 |
| ,, | 1807 | 13 |
| Lingarajēndra Vaḍeyar II | 1810 | 26 |
| ,, | 1812 | 8 |
| ,, | 1817 | 9, 11 |
| Vīrarajēndra Vaḍeyar II | 1822 | 3 |
| ,, | 19th century | 34, 105 |
| Vira Vaḍeya (?) | ,, | 33 |
| | **BRITISH** | |
| Capt. Le Hardy(Superintendent) | 1839 | 24 |
| | **MISCELLANEOUS** | |
| | 944 | 37 |
| | 10th century | 56 |
| | 1001 | 2 |
| | 1044 | 89 |
| | 1058 | 74 |
| | 1064 | 71 |
| | 11th century | 47, 55, 78, 79, 82, 83, 100, 101 |
| | 12th century | 4, 6, 7, 43, 77 |
| | 1216 | 76 |
| | 1264 | 95 |
| | 1278 | 84 |
| | 13th century | 52, 54 |
| | 1359 | 39 |
| | 1380 | 58 |
| | 14th century | 20, 21, 92 |
| | 1498 | 44 |
| | 15th century | 88 |
| | 1544 | 19 |
| | 1597 | 57 |
| | 17th century | 102 |
| | 18th century | 38, 41, 45, 46 |
| | 1808 | 16 |
| | 1834-35 | 27 |
| | 1840-41 | 106 |
| | 1843 | 30 |
| | 1857 | 99 |

| King | Date (in A. D.) | No. |
|---|---|---|
| | **MISCELLANEOUS** *(Contd.)* | |
| | 1874 | 17 |
| | 1879 | 14, 18 |
| | 1881 | 23 |
| | 1884 | 61 |
| | 1885 | 12 |
| | 19th century | 10, 15, 25, 59, 103, 104 |

# INTRODUCTION

In the year 1886, B. Lewis Rice published the first edition of "Coorg Inscriptions" which formed the first volume in the series entitled Epigraphia Carnatica. This volume contained translations and transliterations of 23 inscriptions discovered by him in the Coorg District which was then a separate state. When he had to compile the Gazetteer of Coorg for the New Imperial Gazetteer of India, Rice found it necessary to resurvey the area. The inscriptions newly discovered during this resurvey were included in the Bangalore and Tumkur volumes (IX and XII) of Epigraphia Carnatica as supplements. All the inscriptions discovered in the Coorg area till then were again put together and a revised edition of 'Coorg Inscriptions' was published by Rice in the year 1914.

The revision of this volume has now been taken up. In order to compare the texts of the printed inscriptions with the originals, two survey tours were undertaken. Several inscriptions were compared with the originals and corrections made. Texts of a few inscriptions which could not be traced during this survey have been retained as they were in the previous edition. During this survey 32 inscriptions, not known before, have been brought to light.

The number of inscriptions in the present edition is 106 while the previous edition contained 75. No. 72 of the previous edition has not been included here as no letter in it could be deciphered.

Though the inscriptions are few in number they are of importance in tracing the history of the Coorg District. Most of them can be assigned to specific dynasties or kings. They have been briefly discussed here.

## GANGAS

The earliest of the inscriptions in Coorg District shows that this area formed a part of Gangavāḍi, the territory of the Gangas. No. 1, the Mercara copper plate record found in the treasury at Mercara, was the first of the series of copper plate records of the Gangas discovered and published by B.L. Rice. This is a set of three plates secured by a ring and an elephant seal Each plate measures 18 cms x 7½ cms. The first and the last plates are engraved on the inner sides only. It is not known as to when and by whom these plates were deposited in the Mercara treasury. They were brought to the notice of Burgess by Graeter, and are now deposited in the Lutheran Mission Museum at Basle in Switzerland.

The writing is in Hale-Kannada characters and the engraving is rather crude. The language of the introductory part dealing with the genealogy and the date is Sanskrit; but the details of the grant and boundaries of the villages granted are in Kannada. The whole record is in prose except for the four imprecatory verses at the end.

This copper plate record registers a gift made by the Ganga king Konguṇimahādhirāja Avinīta. The record begins with an invocation to god Padmanābha and then narrates the genealogy of the Gangas commencing from Konguṇimahādhirāja of the Jāhnavēya family and Kāṇvāyana gotra. It is as follows:

Konguṇi
|
Mādhava I
|
Harivarma
|
Vishṇugōpa
|
Mādhava II
|
Konguṇimahādhirāja Avinīta.

Mādhava I is stated to have been the author of the commentary on *Dattakasūtra*. Vishṇugōpa is described as the worshipper of the holy feet of god Nārāyaṇa, while his son Mādhava II was the devotee of Tryaṁbaka. His wife, Avinīta's mother, was the beloved sister of the Kadaṁba king Kṛishṇavarmma-mahādhirāja.

The record registers a gift of Badaṇeguppe and other villages to the Śrīvijaya Jinālaya of Taḷavananagara made over to a Jaina priest by name Chandaṇandi-bhaṭāra. The spiritual pedigree of this ascetic is given as follows:

Guṇachandra-bhaṭāra
|
Abha[ya]nandi-bhaṭāra
|
Śīlabhadra-bhaṭāra
|
Jayanandi-bhaṭāra
|
Guṇanandi-bhaṭāra
|
Chandaṇandi-bhaṭāra

These belonged to Dēsigagaṇa and Koṇḍakundānvaya.

The date of the grant is stated to be the year 388, Māgha, Svāti-nakshatra, śu. pañchami, Sōmavāra. No cyclic year is mentioned. It is also not clear if the year 388 refers to the Śaka era. If this is taken as the Śaka year, the given date would correspond to 466 A.D. But the details regarding the week day and the *nakshatra* do not tally. In Śaka 388, Māgha śu. 5 fell on Wednesday and not on Monday and the *nakshatra* was Uttarābhādrapada and not Svāti.

The grant, which consisted of the village Badaṇeguppe situated in Eḍenāḍ Seventy of the Pūnāḍ Six Thousand division, was first obtained by the minister (*mantri*) of Akālavarsha Pṛithvīvallabha from Avinīta-mahārāja and was given to the Jaina priest for the maintenance of Śrīvijaya Jinālaya at Taḷavananagara. Taḷavananagara is the same as Talakāḍ (in Mysore District), the capital of the Gangas, situated on the banks of the Kāvēri. Badaṇeguppe, the village granted, and some other villages named are also situated in Mysore District. Pūnāḍ Six Thousand in which the village was situated was the Punnāṭa kingdom located in Heggadadevanakote and neighbouring Taluks with Kīrtipura or Kittūr, on the banks of the Kabinī river, as its capital.

The witnesses for the grant made are listed. Therein figure Nandyāla of Maṇiyugura and Simbāla. It is interesting to note that these figure as witnesses in several other Ganga records. Also the Tagaḍas of Gaṇiganūr are cited as witnesses. This Gaṇiganūr may be identified with Gaṇagūr in Somavarpet Taluk. This is a place of great antiquity, associated with the Gangas whose records are found here.

The plates were engraved by Viśvakarma, which was a common official designation for the court-engraver.

There is a controversy regarding the authenticity of this record. Fleet and some other scholars have raised objection for accepting the Ganga copper plate charters as genuine, while, B.L. Rice has tried to establish the credibility of these records[1]. Without entering into the details, the following points may be noted about the present copper plate record.

A large number of Ganga copper plate records have been discovered and on a comparative study, it is now possible to separate the genuine records from the others. The present plates profess to have been issued in 466 A.D. As already seen, the details of the date do not tally. The known genuine copper plate records issued by the Ganga kings earlier to Śivamāra I do

1. For detailed discussions see Ind. Ant. I and XII; E.I. III and VI; Introduction to E.C. Vol. I (Revised Edition by Rice), IV and VI (First Editions).

management. He also got a well called Nāgavāvi, excavated by the *nakaras* (No. 79). The figure of a cobra is also engraved below this inscription. Guṇasēnapaṇḍita was the *guru* of the Hoysaḷa king Vinayāditya and received a grant from Pariyaladēvi for the maintenance of the basadi built at Sosevūr. He is also referred to as the *guru* of Echaladēvi, queen of Hoysaḷa Eṟeyanga in an inscription in Arakalgud Taluk. An inscription on a large boulder near Muḷḷūr (No. 83), with footprints, appears to refer to Guṇasenapaṇḍita indicating that, that spot was the place where he perfomed penance and probably breathed his last. According to No. 71 Guṇasēnapaṇḍita gained the abode of *Mōkshalakshmī* (or died) in 1064 A.D. He was proficient in the supreme *ārhantya* and other three jewels, all the great seiences of grammar, the *āgama* and the six established systems of logic.

The basadis at Muḷḷūr are sqare in plan and comparatively plain structures built of granite slabs. But the images that are still remaining in them are beautiful works of art and represent the sculptural standard that prevailed during the Koṅgāḷva rule.

There are a few more inscriptions recording the prevalance of Jainism during the Koṅgāḷva period. No. 89 records the death, in 1044 A.D., of Prabhāchandradēva, disciple of Śubhachandradēva. No. 100 states that Jakkiyabbe, wife of Eḍayya, resolved to obtain *mukti* by the performance of *sanyasana* and died. Similarly, one Kiviriyayya, cheif of Maduvanga-nāḍ keeping the vow for twelve days in the Chaṅgāḷva-basadi attained salvation (No. 101).

Incidentally it may be noted that although the Koṅgāḷvas were Jains, they seem to have patronised other religions also. As can be seen in Nos. 48 and 49, Rājēndra-Pṛithvī-Kongāḷva made grants to the Siddhēśvara temple at Posavaḷḷi.

Three Jaina images, two of them of Śāntinātha, with inscriptions (Nos. 4, 6, and 7) in characters of the 12th century engraved on their pedestals, are now exhibited in the Museum at Mercara. Before they were shifted to the Museum, they were found in the basadi at Anjanagiri. The existing basadi at this place was constructed in 1544 A.D. (No. 19). The epigraph that gives this information, also records the interesting fact that in Śaka 1453 (1531-32 A.D.) Abhinava Chārukīrtipaṇḍitadēva discovered the images of Śāntitīrthēśvara and Anantanāthasvāmi in the river Suvarṇāvati and that they were installed in a basadi constructed first in wood and later in stone, on the former date, at Anjanagiri, at the instance of Śāntikīrtidēva. The installation was done by Śāntōpādhyāya of Koṇasanagara, who is described as *svānuja* of Śānti-kīrti-dēva.

It is clear that the images now in Mercara, were the ones originally set up at Tātangi. No. 4 says that the image of Śāntināthadēva was consecrated by Māghaṇandi-bhaṭṭāraka of Tātangi, belonging to Mūlasangha, Dēsiyagaṇa, Pustakagachchhaa nd Koṇḍakundānvaya. No. 6 also refers to the image of Śāntinātha consecrated by the *nakharas* of Tātangiya-paṭṭaṇa who were disciples of Heragina Hariśchandradēva. Obviously the other image, below which No. 7 is engraved is that of Anantanāthasvāmi got made by Hariyaṇṇa heggaḍe, the *aśvādhyaksha* (head of the cavalry), disciple of Nayakīrtisiddhāntadēva. Tātangi was a place situated somewhere on the banks of the Suvarṇāvati, i.e., the Hārangi river, which flows about 5 kilometres north of Anjanagiri. It is probable that one of the floods in the river washed out the basadi, wherein these images were installed, and the images were discovered by Abhinava-Chārukīrti, centuries later.

No. 19 gives the genealogy of the Jaina priests who belonged to Beḷuguḷa, as:



The first of these bears several epithets like *rāyarājaguru, maṇḍalāchārya, mahāvādavādīśvara* etc. and also *Ballāḷarāyajīvarakshāpālaka* which indicate that he was the royal priest of the Hoysaḷas and was the saviour of the life of Ballāḷarāya. But, who this Ballāḷarāya was, whose life he saved is not known. Tradition attributes this to Ballāḷa I.

## GENERAL

Two inscriptions (Nos. 37 and 56) of the 10th century record the death of two individuals by self-immolation. In both these the deceased person is stated to have had his head cut off. Both of them being damaged, the details cannot be made out. The first of them is dated 944. A.D. and the name of the hero may be Būchaga. The second refers to Lalluga, younger brother of Raṇivoḷiga as the hero.

No 49, dated 1070 A.D., registers a gift to god Siddhēśvara Mahādēva, probably after the purchase of the gift land from Nīragāvuṇḍa of Posavaḷḷi. The exact meaning of the term *āḍuvala* used in this connection *(ponnaṟe koṭṭu maṇṇaṟe koṇḍu pattu khaṇḍuveya āḍavalaṁ)* is not clear. In No. 48, of the same date there is a reference to *āḍavalaṁ gadyāṇa.*

Two records (Nos. 52 and 60) of the 13th century from Gaṇagūru and Chauḍlu respectively, refer to the regulations laid down with regard to the right of property. The former states that in the absence of male (heir), the daughters' children were to have the succession right. This regulation probably was brought into vogue in Gunda-nāḍ. The later record (No. 60) states that it confirms the daughter's right of succession to property which was in vogue earlier in Kundūr (?) and also bestows similar right to the children of the daughter as also those of female slaves *(tottina makkaḷiṁge).*

No. 44, dated probably 1498 A.D., records the grant of *gauḍike* to Lingēgauḍa of Hānagala by Nanjarappayaṇṇa. Hānagala may be the same Hāngal in Dharwar District and if so it is interesting to note that the donee (or his ancestors) hailed from such a distant place then.

No. 25 of the 19th century registers a gift of a bell in memory of Muddamma wife of Moṇṇappa whose family name was *Maneyappaṇḍa.*

Attention is drawn towards number of *nāḍus*, that figure in the volume, some of which are listed below. Students of historical geography could make use of this for further study. Pūnāḍu 6000, Eḍenāḍu-70, Muḷḷūrnāḍu, Ulugali Mūḍagērināḍu, Horūru Nūrokkalunāḍu, Kārattu Mūrnāḍu, Beṭṭiyattanāḍu, Pāḍi-nālkunāḍu, Yaḍavanāḍu, Gundanāḍu-70, Tenkanāḍu (70), Saṁbathanāḍu etc. Some of these are in existence even today.

# ಪೀಠಿಕೆ

೧೮೮೬ನೆಯ ವರ್ಷದಲ್ಲಿ ಬಿ. ಲೂಯಿ ರೈಸರು ‘ ಎಪಿಗ್ರಾಫಿಯ ಕರ್ನಾಟಿಕ ’ ಸರಣಿಯಲ್ಲಿ ಮೊದಲನೆಯ ಸಂಪುಟವಾದ ಕೊಡಗು ಶಾಸನಗಳ ಪ್ರಥಮ ಆವೃತ್ತಿಯನ್ನು ಪ್ರಕಟಿಸಿದರು. ಈ ಸಂಪುಟವು ಆ ಕಾಲದಲ್ಲಿ ಪ್ರತ್ಯೇಕ ಪ್ರಾಂತವಾಗಿದ್ದ ಕೊಡಗಿನಲ್ಲಿ ರೈಸರು ಕಂಡುಹಿಡಿದ ೨೩ ಶಾಸನಗಳ ಭಾಷಾಂತರ ಮತ್ತು ಲಿಪ್ಯಂತರಗಳನ್ನೊಳಗೊಂಡಿದೆ. ‘ನ್ಯೂ ಇಂಪೀರಿಯಲ್ ಗೆಜೆಟಿಯರ್ ಆಫ್ ಇಂಡಿಯ’ಕ್ಕಾಗಿ ಕೊಡಗಿನ ಗೆಜೆಟಿಯರನ್ನು ಸಿದ್ಧಪಡಿಸಬೇಕಾದ ಸಮಯದಲ್ಲಿ ಈ ಪ್ರದೇಶದಲ್ಲಿ ಪುನರ್ಪರಿವೀಕ್ಷಣ ಕಾರ್ಯವನ್ನು ಕೈಗೊಳ್ಳುವುದು ಅಗತ್ಯವೆಂದು ರೈಸರು ಭಾವಿಸಿದರು. ಈ ಪುನರ್ಪರಿವೀಕ್ಷಣೆಯಲ್ಲಿ ಹೊಸದಾಗಿ ಕಂಡುಹಿಡಿಯಲಾದ ಶಾಸನಗಳನ್ನು ‘ ಎಪಿಗ್ರಾಫಿಯ ಕರ್ನಾಟಿಕ ’ ದ ಬೆಂಗಳೂರು ಮತ್ತು ತುಮಕೂರು ಸಂಪುಟಗಳಲ್ಲಿ ( IX ಮತ್ತು XII—ಪ್ರಥಮ ಆವೃತ್ತಿ) ಅನುಬಂಧಗಳಾಗಿ ಸೇರಿಸಲಾಯಿತು. ೧೯೧೪ರಲ್ಲಿ ರೈಸರು ಈ ಎಲ್ಲ ಶಾಸನಗಳನ್ನು ಪುನಃ ಒಟ್ಟಿಗೆ ಸೇರಿಸಿಕೊಂಡು ಶಾಸನಗಳ ಪರಿಷ್ಕೃತ ಆವೃತ್ತಿಯನ್ನು ಪ್ರಕಟಿಸಿದರು.

ಈ ಸಂಪುಟದ ಪರಿಷ್ಕರಣ ಕಾರ್ಯವನ್ನು ಈಗ ಮತ್ತೆ ಕೈಗೊಳ್ಳಲಾಗಿದೆ. ಈ ಸಂದರ್ಭದಲ್ಲಿ ಪ್ರಕಟಿತ ಶಾಸನಗಳ ಪಾಠಗಳನ್ನು ಮೂಲದೊಂದಿಗೆ ಹೋಲಿಸಿ ನೋಡಲು ಎರಡು ಪರಿವೀಕ್ಷಣ ಪ್ರವಾಸಗಳನ್ನು ಕೈಗೊಳ್ಳಲಾಯಿತು. ಅನೇಕ ಶಾಸನಗಳನ್ನು ಮೂಲದೊಂದಿಗೆ ಹೋಲಿಸಿ, ಅವಶ್ಯವಿದ್ದಲ್ಲಿ ಅವುಗಳ ಪಾಠಗಳನ್ನು ತಿದ್ದಿಕೊಳ್ಳಲಾಗಿದೆ. ಮೂಲಶಾಸನ ದೊರೆಯದ ಸಂದರ್ಭಗಳಲ್ಲಿ ಮಾತ್ರ ಅವುಗಳ ಪಾಠಗಳನ್ನು ಹಿಂದಿನ ಆವೃತ್ತಿಯಲ್ಲಿದ್ದ ಸ್ವರೂಪದಲ್ಲಿಯೇ ಉಳಿಸಿಕೊಳ್ಳಲಾಗಿದೆ. ಇದುವರೆಗೆ ಗಮನಕ್ಕೆ ಬಾರದಿದ್ದ ಮೂವತ್ತೆರಡು ಶಾಸನಗಳನ್ನು ಈ ಸಂಪುಟದಲ್ಲಿ ಪ್ರಕಟಿಸಲಾಗಿದೆ.

ಈ ಆವೃತ್ತಿಯಲ್ಲಿ ಪ್ರಕಟವಾಗಿರುವ ಶಾಸನಗಳ ಸಂಖ್ಯೆ ೧೦೬. ಹಿಂದಿನ ಆವೃತ್ತಿಯಲ್ಲಿದ್ದ ಶಾಸನಗಳ ಸಂಖ್ಯೆ ೭೫ ; ಇವುಗಳಲ್ಲಿ ಓದಲು ಸಾಧ್ಯವಾಗದಂತಹ ಸ್ಥಿತಿಯಲ್ಲಿರುವ ಹಿಂದಿನ ಆವೃತ್ತಿಯ ೭ನೆಯ ನಂಬರಿನ ಶಾಸನವನ್ನು ಈ ಸಂಪುಟದಲ್ಲಿ ಸೇರಿಸಿಲ್ಲ.

ಈ ಸಂಪುಟದಲ್ಲಿರುವ ಶಾಸನಗಳ ಸಂಖ್ಯೆ ಕೆಲವೇ ಆದರೂ ಕೊಡಗು ಜಿಲ್ಲೆಯ ಇತಿಹಾಸದ ಅಧ್ಯಯನಕ್ಕೆ ಮುಖ್ಯವಾದವು. ಇವುಗಳಲ್ಲಿ ಅನೇಕ ಶಾಸನಗಳನ್ನು ನಿರ್ದಿಷ್ಟ ರಾಜವಂಶಗಳಿಗೆ ಸೇರಿಸಬಹುದು. ಈ ಶಾಸನಗಳಲ್ಲಿ ಹಲವನ್ನು ಇಲ್ಲಿ ಸಮೀಕ್ಷಿಸಲಾಗಿದೆ.

## ಗಂಗರು

ಕೊಡಗು ಜಿಲ್ಲೆಯಲ್ಲಿ ಕಂಡುಬರುವ ಪ್ರಾಚೀನ ಶಾಸನಗಳಿಂದ ಈ ಪ್ರದೇಶವು ಗಂಗವಾಡಿಯ ಒಂದು ಭಾಗವಾಗಿತ್ತೆಂದು ತಿಳಿದುಬರುತ್ತದೆ. ಬಿ. ಎಲ್. ರೈಸರು ಅನ್ವೇಕ್ಷಿಸಿ, ಪ್ರಕಟಿಸಿದ ಗಂಗ ತಾಮ್ರಶಾಸನಗಳ ಸರಣಿಯಲ್ಲಿ ಮಡಿಕೇರಿಯ ಖಜಾನೆಯಲ್ಲಿ ಕಂಡುಬಂದ ತಾಮ್ರ ಶಾಸನವೇ (೧ನೆಯ ಶಾಸನ) ಮೊದಲನೆಯದು. ಮೂರು ಹಲಗೆಗಳನ್ನೊಳಗೊಂಡ ಈ ಶಾಸನವು ಉಂಗುರ ಮತ್ತು ಗಜ ಲಾಂಛನಗಳಿಂದ ಕೂಡಿದೆ. ಪ್ರತಿ ಹಲಗೆಯೂ ೧೮ ಸೆಂಟಿಮೀಟರ್ ಉದ್ದ ಮತ್ತು ೭½ ಸೆಂಟಿಮೀಟರ್ ಅಗಲವಿದೆ. ಮೊದಲನೆಯ ಹಾಗೂ ಕೊನೆಯ ಹಲಗೆಗಳ ಒಳಭಾಗಗಳಲ್ಲಿ ಮಾತ್ರ ಬರವಣಿಗೆ ಇದೆ. ಈ ತಾಮ್ರಪಟವು ಮಡಿಕೇರಿಯ ಖಜಾನೆಗೆ ಯಾವಾಗ ಮತ್ತು ಯಾರಿಂದ ಸೇರಿಸಲಾಯಿತೆಂಬುದು ತಿಳಿದುಬಂದಿಲ್ಲ. ಈ ಶಾಸನವನ್ನು ಗ್ರೇಟರ್ ಎಂಬುವನು ಬರ್ಜೆಸ್ ಎಂಬ ವಿದ್ವಾಂಸನ ಗಮನಕ್ಕೆ ತಂದನು. ಈಗ ಈ ಶಾಸನವು ಸ್ವಿಡ್ಜರ್ಲೆಂಡಿನ ಬ್ಯಾಸೆಲ್ ಎಂಬ ಸ್ಥಳದಲ್ಲಿರುವ ಲ್ಯುಥೇರನ್ ಕ್ರೈಸ್ತ ಸಂಘದ ವಸ್ತುಸಂಗ್ರಹಾಲಯದಲ್ಲಿದೆ.

ಈ ಶಾಸನವು ಹಳಗನ್ನಡ ಲಿಪಿಯಲ್ಲಿದೆ. ಆದರೆ, ಅಕ್ಷರಗಳ ಕೆತ್ತನೆ ಹೆಚ್ಚು ಒರಟು. ರಾಜವಂಶಾವಳಿಯನ್ನು ನಿರೂಪಿಸುವ ಆರಂಭ ಭಾಗ ಹಾಗೂ ತೇದಿಯ ವಿವರಗಳುಳ್ಳ ಭಾಗವು ಸಂಸ್ಕೃತದಲ್ಲಿಯೂ, ದಾನಕ್ಕೆ ಸಂಬಂಧಿಸಿದ ವಿವರಗಳು ಮತ್ತು ದಾನವಿತ್ತ ಗ್ರಾಮದ ಎಲ್ಲೆಗಳ ವಿವರಗಳು ಕನ್ನಡದಲ್ಲಿಯೂ ಇವೆ. ಕೊನೆಯಲ್ಲಿ ಬರುವ ನಾಲ್ಕು ಫಲಶ್ರುತಿ ಶ್ಲೋಕಗಳ ಹೊರತು ಇಡೀ ಶಾಸನವು ಗದ್ಯರೂಪದಲ್ಲಿಯೇ ಇದೆ.

ಕೊಂಗುಣಿ ಮಹಾಧಿರಾಜ ಅವಿನೀತನೆಂಬ ಗಂಗವಂಶದ ದೊರೆಯು ಮಾಡಿದ ದಾನ ವಿಷಯವನ್ನು ಈ ಶಾಸನವು ವಿವರಿಸುತ್ತದೆ. ಪದ್ಮನಾಭನೆಂಬ ದೇವತೆಯ ಸ್ತುತಿಯಿಂದ ಈ ಶಾಸನ ಆರಂಭವಾಗುತ್ತದೆ. ಅನಂತರ ಜಾಹ್ನವೇಯ ವಂಶದ ಕಣ್ವಾಯನ ಗೋತ್ರಕ್ಕೆ ಸೇರಿದ ಕೊಂಗುಣಿ ಮಹಾಧಿರಾಜನಿಂದ ಆರಂಭವಾಗುವ ಗಂಗರ ವಂಶಾವಳಿಯನ್ನು ಕೊಟ್ಟಿದೆ. ಅದು ಹೀಗಿದೆ :

ಕೊಂಗುಣಿ

|

ಮಾಧವ I

|

ಹರಿವರ್ಮ

|

ವಿಷ್ಣುಗೋಪ

|

ಮಾಧವ II

|

ಕೊಂಗುಣಿ ಮಹಾಧಿರಾಜ ಅವಿನೀತ.

ಮೊದಲನೆಯ ಮಾಧವನು 'ದತ್ತಕಸೂತ್ರ'ವೆಂಬ ಗ್ರಂಥಕ್ಕೆ ವ್ಯಾಖ್ಯಾನವನ್ನು ರಚಿಸಿದನೆಂದು ಹೇಳಲಾಗಿದೆ. ವಿಷ್ಣುಗೋಪನು ಭಗವನ್ನಾರಾಯಣನ ಪಾದಾರಾಧಕನಾದರೆ, ಅವನ ಮಗ ಇಮ್ಮಡಿ ಮಾಧವನು ತ್ರ್ಯಂಬಕನ ಭಕ್ತ. ಇಮ್ಮಡಿ ಮಾಧವನ ಪತ್ನಿಯು ಕದಂಬ ವಂಶದ ಅರಸನಾದ ಕೃಷ್ಣವರ್ಮ ಮಹಾಧಿರಾಜನ ಪ್ರಿಯಸೋದರಿಯಾಗಿದ್ದಳು. ಇವು ಶಾಸನದಲ್ಲಿ ಕೊಡಲಾಗಿರುವ ಕೆಲವು ವಿವರಗಳು.

ತಲವನನಗರದಲ್ಲಿನ ಶ್ರೀವಿಜಯಜಿನಾಲಯಕ್ಕಾಗಿ ಆಚಾರ್ಯನಾದ ಚಂದಣಂದಿಭಟಾರನಿಗೆ ಬದಣೆಗುಪ್ಪೆ ಮತ್ತು ಇತರ ಗ್ರಾಮಗಳನ್ನು ದತ್ತಿಯಾಗಿ ಬಿಡಲಾಯಿತೆಂದು ತಾಮ್ರಪಟ ಹೇಳುತ್ತದೆ. ದೇಸಿಗಣ, ಕೊಂಡಕುಂದಾನ್ವಯಕ್ಕೆ ಸೇರಿದ ಈ ಆಚಾರ್ಯರ ವಂಶಾವಳಿಯನ್ನು ಶಾಸನದಲ್ಲಿ ಕೊಟ್ಟಿದೆ. ಅದು ಹೀಗಿದೆ :

ಗುಣಚಂದ್ರ ಭಟಾರ

|

ಅಭ[ಯ*]ನಂದಿ ಭಟಾರ

|

ಶೀಲಭದ್ರ ಭಟಾರ

|

ಜಯನಂದಿ ಭಟಾರ

|

ಗುಣನಂದಿ ಭಟಾರ

|

ಚಂದಣಂದಿ ಭಟಾರ

ಶಾಸನದಲ್ಲಿ ತೇದಿಯ ವಿವರಗಳನ್ನು ಕೊಡಲಾಗಿದೆ. ಶಾಸನ ಹುಟ್ಟಿದುದು ೩೮೮ನೆಯ ವರ್ಷ, ಮಾಘ ಶುದ್ಧ ಪಂಚಮಿ, ಸೋಮವಾರ, ಸ್ವಾತಿನಕ್ಷತ್ರದಂದು. ವರ್ಷದ ಹೆಸರನ್ನು ಉಲ್ಲೇಖಿಸಿಲ್ಲ. ೩೮೮ ಎಂಬುದು ಯಾವ ಗಣನೆಯ ಪ್ರಕಾರ ಎಂಬುದೂ ಹೇಳಿಲ್ಲ. ಇದು ಶಕಸಂವತ್ಸರವಾಗಿರಬಹುದು. ಹಾಗೆಣಿಸಿದಲ್ಲಿ ೩೮೮ ಎಂಬುದು ಕ್ರಿ. ಶ. ೪೬೬ ಆಗುತ್ತದೆ. ಆದರೆ ಇದರಲ್ಲಿ ಕೊಡಲಾದ ಇತರ ವಿವರಗಳು ತಾಳೆಹೊಂದುವುದಿಲ್ಲ. ಮಾಘಶುದ್ಧ ಪಂಚಮಿ ಬುಧವಾರವಾಗಿದ್ದು ಅಂದು ಉತ್ತರಾಭಾದ್ರಪದ ನಕ್ಷತ್ರವಿದ್ದಿತೇ ಹೊರತು ಶಾಸನದಲ್ಲಿ ಹೇಳಿರುವಂತೆ ಸೋಮವಾರ, ಸ್ವಾತಿನಕ್ಷತ್ರ ಆಗಿರಲಿಲ್ಲ.

ಪೂನಾಡು ಆರುಸಾವಿರ ಪ್ರದೇಶದೊಳಗಣ ಎಡೆನಾಡು ಎಪ್ಪತ್ತಕ್ಕೆ ಸೇರಿದ ಬದಣೆಗುಪ್ಪೆ ಗ್ರಾಮವನ್ನು ಆಕಾಳವರ್ಷ ಪೃಥ್ವೀವಲ್ಲಭನ ಮಂತ್ರಿಯು ಮೊದಲು ಅವಿನೀತ ಮಹಾಧಿರಾಜನಿಂದ ಪಡೆದು, ಅದನ್ನು ತಲವನನಗರದ ಶ್ರೀವಿಜಯ ಜಿನಾಲಯದ ಸಂರಕ್ಷಣೆಗಾಗಿ ಜೈನಗುರುವಿಗೆ ದಾನಮಾಡಿದನು. ಈಗ ಕಾವೇರಿನದಿಯ ತೀರದಲ್ಲಿರುವ ಮತ್ತು ಗಂಗರ ರಾಜಧಾನಿಯಾಗಿದ್ದ ತಲಕಾಡು ಅಂದು ತಲವನನಗರವೆನಿಸಿಕೊಂಡಿತ್ತು. ಇದು ಮೈಸೂರು ಜಿಲ್ಲೆಯಲ್ಲಿದೆ. ದಾನಗ್ರಾಮವಿದ್ದ ಪೂನಾಡು ಆರುಸಾವಿರ ಪ್ರದೇಶವು ಈಗಿನ ಹೆಗ್ಗಡದೇವನಕೋಟೆ ಮತ್ತು ಅಕ್ಕಪಕ್ಕದ ತಾಲ್ಲೂಕುಗಳನ್ನೊಳಗೊಂಡಿದ್ದ ಪುನ್ನಾಟ ರಾಜ್ಯವಾಗಿದ್ದಿತು. ಕಬಿನಿ ನದಿಯ ತೀರದಲ್ಲಿಯ ಕಿತ್ತೂರು ಅಥವಾ ಕೀರ್ತಿಪುರವು ಅದರ ರಾಜಧಾನಿಯಾಗಿತ್ತು.

ಈ ದತ್ತಿಗೆ ಸಾಕ್ಷಿಗಳನ್ನು ಉಲ್ಲೇಖಿಸಲಾಗಿದೆ. ಅವರಲ್ಲಿ ಮಣಿಯುಗುರದ ನಂದ್ಯಾಲರು ಮತ್ತು ಸೀಂಬಾಲರು ಇತರ ಕೆಲವು ಗಂಗರ ಶಾಸನಗಳಲ್ಲಿಯೂ ಸಾಕ್ಷಿಗಳಾಗಿ ಉಲ್ಲೇಖಿತರಾಗಿದ್ದಾರೆಂಬುದು ಗಮನಾರ್ಹ. ಗಣಿಗನೂರ ತಗಡರು ಸಹ ಉಲ್ಲೇಖಿತರಾದ ಸಾಕ್ಷಿಗಳು. ಗಣಿಗನೂರು ಈಗಿನ ಸೋಮವಾರಪೇಟೆ ತಾಲ್ಲೂಕಿನಲ್ಲಿರುವ ಗಣಗೂರು ಆಗಿರಬಹುದು. ಇದೊಂದು ಪ್ರಾಚೀನ ಸ್ಥಳವಾಗಿದ್ದು, ಇಲ್ಲಿ ಗಂಗರ ಕಾಲಕ್ಕೆ ಸಂಬಂಧಿಸಿದ ಕೆಲವು ಶಾಸನಗಳು ದೊರೆತಿವೆ.

ವಿಶ್ವಕರ್ಮನು ಈ ತಾಮ್ರಶಾಸನವನ್ನು ಕಂಡರಿಸಿದನು. ವಿಶ್ವಕರ್ಮ ಎಂಬುದು ಗಂಗರ ಆಸ್ಥಾನ ಲಿಪಿಕಾರನ ಅಧಿಕೃತ ಪದವಿಯಾಗಿತ್ತು.

ಈ ಶಾಸನದ ಯಥಾರ್ಥತೆಯ ಬಗ್ಗೆ ತೀವ್ರ ವಿವಾದವಿದೆ. ಫ್ಲೀಟ್ ಮತ್ತು ಇತರ ಕೆಲವು ವಿದ್ವಾಂಸರು ಗಂಗರ ತಾಮ್ರಶಾಸನಗಳನ್ನು ನೈಜವೆಂದು ಒಪ್ಪುವುದಿಲ್ಲ. ಆದರೆ, ಬಿ. ಎಲ್. ರೈಸರು ಇವು ವಿಶ್ವಾಸಾರ್ಹವೆಂದು ಸ್ಥಾಪಿಸಲು ಯತ್ನಿಸಿದ್ದಾರೆ.[1] ಈ ವಾದವಿವಾದಗಳ ವಿವರಗಳಿಗೆ ಹೋಗದೆ ಕೆಲವು ಮುಖ್ಯ ಅಂಶಗಳನ್ನು ಮಾತ್ರ ಇಲ್ಲಿ ಗಮನಿಸಬಹುದು.

ಈಗ ಅನೇಕ ಗಂಗರ ತಾಮ್ರಶಾಸನಗಳು ಬೆಳಕಿಗೆ ಬಂದಿವೆ. ಇವುಗಳ ತುಲನಾತ್ಮಕ ಅಧ್ಯಯನದಿಂದ ಕೂಟ ಮತ್ತು ನೈಜ ಶಾಸನಗಳನ್ನು ವಿಂಗಡಿಸುವುದು ಈಗ ಸಾಧ್ಯವಾಗಿದೆ. ಪ್ರಸ್ತುತ ಈ ತಾಮ್ರಶಾಸನವು ಕ್ರಿ. ಶ. ೪೬೬ರಲ್ಲಿ ಹುಟ್ಟಿದಂತೆ ಅದರಲ್ಲಿ ಹೇಳಿದೆ. ಆದರೆ, ಈ ತೇದಿಯ ಕಾಲದ ವಿವರಗಳು ಸರಿಯಾಗಿ ಹೊಂದಿಕೆಯಾಗುವುದಿಲ್ಲವೆಂದು ಮೇಲೆ ನಾವು ನೋಡಿದ್ದೇವೆ. ಮೊದಲನೆಯ ಶಿವಮಾರನಿಗಿಂತ ಹಿಂದಿನ ಗಂಗದೊರೆಗಳ ಕಾಲದಲ್ಲಿ ಹುಟ್ಟಿದ, ನೈಜವೆಂದು ಖಚಿತವಾಗಿರುವ, ಶಾಸನಗಳಲ್ಲಿ ಶಕವರ್ಷದ ಉಲ್ಲೇಖವಿಲ್ಲ. ಹರಿವರ್ಮನ ತಗಡೂರು, ತಂಜಾವೂರು ಮತ್ತು ಕೂಡಲೂರು ಶಾಸನಗಳಲ್ಲಿಯೂ ಈ ಶಾಸನದಲ್ಲಿರುವಂತೆಯೇ ಶಕವರ್ಷವನ್ನು ಉಲ್ಲೇಖಿಸಲಾಗಿದೆ. ಆದರೆ, ಅವುಗಳು ಕೂಟಶಾಸನಗಳೆಂದು ಸಿದ್ಧವಾಗಿವೆ.

ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮಡಿಕೇರಿಯ ಈ ತಾಮ್ರಪಟದ ಲಿಪಿಸ್ವರೂಪವು ಶಾಸನವು ತಿಳಿಸುವ ಕಾಲಕ್ಕಿಂತ ಈಚಿನದೆಂಬುದು ಕಂಡುಬರುತ್ತದೆ. ಅಕ್ಷರಗಳು ಬೆಳವಣಿಗೆ ಹೊಂದಿ ದುಂಡಗಾಗುವ ಲಕ್ಷಣಗಳನ್ನು ಹೊಂದಿವೆ. ೨೩ನೆಯ ಪಂಕ್ತಿಯಲ್ಲಿರುವ ಕಜಿಡು ಮತ್ತು ಕಾಗಣಿತಟಾಕ ಎಂಬಲ್ಲಿಯೂ, ೧೧ನೆಯ ಪಂಕ್ತಿಯಲ್ಲಿರುವ ಪರಾಕ್ರಮ ಮತ್ತು ರಾಜ್ಯ ಎಂಬಲ್ಲಿಯೂ ಕಂಡುಬರುವ ಕಕಾರ ಮತ್ತು ರಕಾರಗಳ ಉದ್ದ ಕಿರಿದಾಗಿರುವುದಲ್ಲದೆ ದುಂಡಾಗುತ್ತಿರುವುದನ್ನೂ ಗಮನಿಸಬಹುದು. ಲಿಪಿಕೆತ್ತನೆ ಹೆಚ್ಚು ಒರಟಾಗಿದೆ. ಪಂಕ್ತಿಗಳು ನೇರವಾಗಿಲ್ಲ. ರಾಜಾಸ್ಥಾನದಲ್ಲಿಯ ನಿಪುಣ ಲಿಪಿಕಾರನಲ್ಲಿ ಈ ದೋಷಗಳಿರಕೂಡದಷ್ಟೆ? ಕಾಗುಣಿತ ದೋಷಗಳೂ ಹೇರಳವಾಗಿವೆ. ಈ ಶಾಸನದಲ್ಲಿ ಉಪಯೋಗಿಸಲಾಗಿರುವ ಕನ್ನಡ ಭಾಷೆಯು ದೋಷಯುಕ್ತವಾಗಿದ್ದು ಪೂರ್ವದ ಹಳಗನ್ನಡವಾಗಿರದೆ ಅದರ ನಂತರದ ಕಾಲದ ಲಕ್ಷಣವನ್ನು ತೋರುತ್ತದೆ. ಕ್ರಿ.ಶ. ೫ನೆಯ ಶತಮಾನ ಮತ್ತು ಅದಕ್ಕೆ ಹಿಂದಿನ ಇತರ ನೈಜ ತಾಮ್ರಪಟಗಳಿಗೆ ಹೋಲಿಸಿದಲ್ಲಿ, ಈ ಶಾಸನದ ಹಲಗೆಗಳ ಅಗಲ ಹೆಚ್ಚು. ಈ ಶಾಸನ ನೈಜವೆಂದು ರೈಸರು ವಾದಿಸಿದರೂ ಮೇಲ್ಕಾಣಿಸಿದ ಅಂಶಗಳು ಇದು ಕೃತಕಶಾಸನವೆಂಬುದನ್ನೇ ಸೂಚಿಸುತ್ತವೆ.

ಆದರೂ, ಇದರಲ್ಲಿ ಅವಿನೀತನವರೆಗಿನ ಗಂಗ ವಂಶಾವಳಿಯನ್ನು ಸರಿಯಾಗಿ ತಿಳಿಸಿರುವುದಲ್ಲದೆ ಪ್ರತಿಯೊಬ್ಬ ಗಂಗ ದೊರೆಯ ಬಿರುದುಗಳೂ ಅನೇಕ ನೈಜ ದಾಖಲೆಗಳಲ್ಲಿರುವಂತೆಯೇ ಇವೆ. ಆದ್ದರಿಂದ, ಈ ಶಾಸನವು ಮೂಲಶಾಸನವೊಂದರ ಪ್ರತಿಯಾಗಿದ್ದು, ಕ್ರಿ.ಶ. ೯ನೆಯ ಶತಮಾನದ ಸುಮಾರಿಗೆ ಇದು ಹುಟ್ಟಿರಬಹುದೆಂದು ಮಾತ್ರ ಹೇಳಬಹುದು. ಆದರೂ ಇದು ಬಹಳ ಅಶುದ್ಧವಾಗಿ ತಯಾರಾದ ಪ್ರತಿ. ಇದಕ್ಕೆ ಉತ್ತಮ ನಿದರ್ಶನ ಉತ್ತನೂರಿನಲ್ಲಿ ದೊರೆತ ಗಂಗ ದುರ್ವಿನೀತನ ೩ನೇ ಆಳ್ವಿಕೆಯ ವರ್ಷದ ತಾಮ್ರಶಾಸನ. ಇದು M.A.R. ೧೯೧೬ರ ಪು. ೪೪ರಲ್ಲಿ ಪ್ರಕಟವಾಗಿದೆ. ಈ ಶಾಸನದ ವಿವರಗಳನ್ನೇ ಒಳಗೊಂಡ ಮತ್ತೊಂದು ತಾಮ್ರಶಾಸನವೂ ದೊರಕಿದೆ. ಇದು ಒರಟಾದ ಕೆತ್ತನೆಯಿಂದ ಕೂಡಿದ್ದು ಕೃತಕ ತಾಮ್ರಶಾಸನದ ಎಲ್ಲ ಗುಣಗಳನ್ನೂ ಹೊಂದಿದ್ದರೂ ಮೇಲಿನ ಶಾಸನದ ಪ್ರತಿ ಎನ್ನುವುದು ಸ್ಪಷ್ಟ. ಈ ಶಾಸನವನ್ನು M.A.R. ೧೯೧೭, ಪು. ೩೭ರಲ್ಲಿ ಪ್ರಕಟಿಸಲಾಗಿದೆ.

ಒಟ್ಟಿನಲ್ಲಿ ಮಡಿಕೇರಿಯ ಈ ತಾಮ್ರಶಾಸನ ನೈಜವಲ್ಲವಾದ ಕಾರಣ ಇದರಲ್ಲಿ ಉಕ್ತವಾದ ಅಕಾಳವರ್ಷ ಪೃಥ್ವೀವಲ್ಲಭ ಅಥವಾ ಅವನ ಮಂತ್ರಿ ಮತ್ತು ದಾನದ ಇತರ ವಿವರಗಳ ಬಗ್ಗೆ ಹೆಚ್ಚಿನ ಗಮನವನ್ನು ಕೊಡಬೇಕಾಗಿಲ್ಲ.

ಇದರ ಅನಂತರ ನಾವು ಈ ಸಂಪುಟದ ೯೬ನೆಯ ಶಾಸನವನ್ನು ಇಲ್ಲಿ ಪರಿಶೀಲಿಸುತ್ತೇವೆ. ಈ ಶಿಲಾಶಾಸನದ ಕಾಲ ಶಕ ವರ್ಷ ೮೧೦ಕ್ಕೆ ಸರಿಹೋಗುವ ಕ್ರಿ.ಶ. ೮೮೮ನೆಯ ಫೆಬ್ರುವರಿ ೨೧ನೆಯ ದಿನ. ಇದೊಂದು ರಾಜಶಾಸನ. ಬಿಳಿಯೂರು ೧೨ ಗ್ರಾಮಗಳನ್ನು ಪೆರ್ಣೆಗಡಂಗದ ಸತ್ಯವಾಕ್ಯಜಿನಾಲಯಕ್ಕಾಗಿ ಜೈನ ಯತಿಗಳಾದ ಶಿವನಂದಿಸಿದ್ಧಾಂತ ಭಟಾರರ ಶಿಷ್ಯರಾದ ಸರ್ವ

[1] ಹೆಚ್ಚಿನ ವಿವರಗಳಿಗೆ Ind. Ant. ಸಂಪುಟ I ಮತ್ತು XII ; E.I. III ಮತ್ತು VI ; E.C.I. (ರೈಸರಿಂದ ಪರಿಷ್ಕೃತವಾದ ಆವೃತ್ತಿ), IV ಮತ್ತು VI (ರೈಸ್ ಅವರು ಪ್ರಕಟಿಸಿದ ಮೊದಲನೆಯ ಆವೃತ್ತಿ) ನೆಯ ಸಂಪುಟಗಳಲ್ಲಿನ ಪೀಠಿಕೆಗಳನ್ನು ನೋಡಿ.

ನಂದಿದೇವರಿಗೆ ಸತ್ಯವಾಕ್ಯ ಕೊಂಗುಣಿವರ್ಮ ಧರ್ಮಮಹಾಧಿರಾಜ ಪೆರ್ಮ್ಮಾನಡಿಯು ದತ್ತಿಯಾಗಿ ಬಿಟ್ಟನೆಂದು ಇದು ತಿಳಿಸುತ್ತದೆ. ಉಕ್ತವಾದ ಅರಸನು ಗಂಗ ಇಮ್ಮಡಿ ರಾಚಮಲ್ಲನು. ಸತ್ಯವಾಕ್ಯನೆಂಬ ಅವನ ಹೆಸರನ್ನೇ ಆ ದೇವಾಲಯಕ್ಕೂ ಇಟ್ಟಂತೆ ತೋರುತ್ತದೆ. ಈ ಆಲಯ ಪೆಣ್ಣೆಗಡಂಗದಲ್ಲಿದೆ ಎಂದಿದೆ. ಕಡಂಗ ಎಂದರೆ ಯುದ್ಧ ಸಮಯದಲ್ಲಿ ತೋಡಿಸಲಾದ ಕಂದಕವೆಂದು ರೈಸರು ಹೇಳುತ್ತಾರೆ. (Introduction, ಪು. ೮). ಹಾಗಿದ್ದಲ್ಲಿ ಪೆಣ್ಣೆಗಡಂಗವೆಂಬುದು ಅಂತಹ ಒಂದು ಕಂದಕದ ಹೆಸರಾಗಿರಬಹುದು ಅಥವಾ ಅಂತಹ ಕಂದಕದ ಸಮೀಪದಲ್ಲಿನ ಒಂದು ಗ್ರಾಮದ ಹೆಸರಾಗಿರಬಹುದು. ಈ ಶಾಸನದ ಕಲ್ಲು ನಮಗೆ ದೊರೆತುದೇ ಬಿಳಿಯೂರಿನ ಸಮೀಪದ 'ಕಡಂಗ'ದಲ್ಲಿ. ಆದರೆ ಇದರ ಸುತ್ತಲೂ ಯಾವುದೇ ದೇವಾಲಯ ಇದ್ದುದರ ಕುರುಹುಗಳು ಈಗ ಕಾಣಬಾರವು.

ಈ ಶಾಸನದಲ್ಲಿ ಹೇಳಲಾದ 'ಪೆದ್ದೊಱೆಗರೆಯ ಬಿಳಿಊರ್ಪ್ಪನ್ನಿರ್ಪ್ಪಳ್ಳಿ' ಎಂಬ ಮಾತನ್ನು ಪೆದ್ದೊಱೆಯ ತೀರದ ಬಿಳಿಯೂರು ೧೨ ಗ್ರಾಮಗಳು ಎಂದು ಅರ್ಥೈಸಿ, ಇದರ ಮಟ್ಟಿಗೆ ಪೆದ್ದೊರೆ ಎಂಬುದು ಲಕ್ಷ್ಮಣತೀರ್ಥವೆಂಬ ನದಿ ಎಂದು ರೈಸ್ ಗುರುತಿಸಿದ್ದಾರೆ. ಆದರೆ ಈ ದತ್ತಿಗೆ ಸಾಕ್ಷಿಗಳೆಂದು ಉಕ್ತವಾಗಿರುವವರಲ್ಲಿ ಬೆದ್ದೊಱೆಗರೆ ಯೆಳ್ಪದಿಮ್ಬರೂ ಇದ್ದಾರೆ. ಇದರಿಂದ ಬಿಳಿಯೂರು–೧೨ ಎಂಬುದು ಬೆದ್ದೊಱೆಗರೆ–೭೦ರಲ್ಲಿನ ಒಂದು ಭಾಗವಾಗಿತ್ತೆಂದು ಸೂಚಿತವಾಗುತ್ತದೆ. ೯೮ನೆಯ ನಂಬರಿನ ಶಾಸನದಲ್ಲಿ ನಾಲ್ಪಡಿ ರಾಚಮಲ್ಲನ ಕಿರಿಯ ಸೋದರನಾದ ರಕ್ಕಸನು, ಕ್ರಿ. ಶ. ೯೭೮ರಲ್ಲಿ ಬೆದ್ದೊಱಗರೆಯನ್ನಾಳುತ್ತಿದ್ದನೆಂದು ಹೇಳಿದೆ. ಆದ್ದರಿಂದ ಬೆದ್ದೊಱಗರೆ ಎಂಬುದು ಆ ಹೆಸರಿನ ಒಂದು ಪ್ರಾಂತ್ಯದ ಮುಖ್ಯಸ್ಥಳವಾಗಿರಬೇಕೆಂದು ಸ್ಪಷ್ಟವಾಗುತ್ತದೆ.

ಈ ಶಾಸನ(ನಂ. ೯೮)ದಲ್ಲಿ ಕೊಟ್ಟಿರುವ ತೇದಿಯ ವಿವರಗಳು ಸ್ವಾರಸ್ಯಕರವಾಗಿವೆ. ಶಕವರ್ಷ ೮೯೯ನೆಯ ಈಶ್ವರ ಸಂವತ್ಸರದ ಫಾಲ್ಗುಣ ಶುಕ್ಲಪಕ್ಷದಲ್ಲಿ, ತಿಥಿಯನ್ನು ನಿರ್ದೇಶಿಸಿ 'ನನ್ದೀಸ್ವರಂ ತಲೆದಿವಸಮಾಗೆ' ಎಂದು ಹೇಳಿದೆ. ನನ್ದೀಶ್ವರ ಎನ್ನುವುದು ಜೈನರಲ್ಲಿ ಮತಕ್ಕೆ ಸಂಬಂಧಿಸಿದ ಒಂದು ವಿಧಿ. ಇದನ್ನು ಆಷಾಢ, ಕಾರ್ತಿಕ ಮತ್ತು ಫಾಲ್ಗುಣ ಮಾಸಗಳಲ್ಲಿ ಶುಕ್ಲ ಪಕ್ಷದ ಅಷ್ಟಮಿಯಂದು ಆರಂಭಿಸಿ, ಹುಣ್ಣಿಮೆಯ ದಿನ ಮುಕ್ತಾಯಗೊಳಿಸುತ್ತಾರೆ. ಅಷ್ಟಮಿಯನ್ನು ಪಾದ ಎಂದು ಗಮನಿಸಿದಲ್ಲಿ ೧೫ನೆಯ ಕೊನೆಯದಿನ ಈ ಪರ್ವದ ತಲೆ. ಆ ದಿವಸವನ್ನು ಶಾಸನದಲ್ಲಿ 'ತಲೆದಿವಸ' ಎಂದು ಕರೆದಿದೆ. ಆದ್ದರಿಂದ ಶಾಸನದಲ್ಲಿ ಉಕ್ತವಾದ ತಿಥಿ ಶುಕ್ಲಪಕ್ಷದ ಹುಣ್ಣಿಮೆ.

೯೭ನೆಯ ಶಾಸನ ಸಹ ಸತ್ಯವಾಕ್ಯ ಕೊಂಗುಣಿವರ್ಮ್ಮಪೆರ್ಮಾನಡಿ—ಅಂದರೆ ಇಮ್ಮಡಿ ರಾಚಮಲ್ಲ—ಯದೇ. ಇದೊಂದು ಕಲ್ನಾಡು. ಅಂದರೆ ಯುದ್ಧದಲ್ಲಿ ಮರಣವನ್ನಪ್ಪಿದ ವೀರನ ಮನೆಯವರಿಗೆ ಕೊಡಲಾಗುತ್ತಿದ್ದ ದತ್ತಿ. ಅರಸನು ಜಡಲ ಎಱೆಯಂಗಗಾವುಣ್ಡನ ಮಗನಿಗೆ (ಆತನ ಹೆಸರನ್ನು ಹೇಳಿಲ್ಲ) ಪೆರ್ಮ್ಮಾಡಿವಟ್ಟವನ್ನು ಕಟ್ಟಿ ಸಿದ್ಧಾಯದ ಹೊನ್ನಿನಲ್ಲಿ ಹತ್ತು ಗದ್ಯಾಣ ಹೊನ್ನು ಮತ್ತು ಬಿಟ್ಟಿಯ ಭತ್ತದಲ್ಲಿ ನೂರು ಭತ್ತವನ್ನು ಕೊಟ್ಟನು. ಅಂದರೆ ಮಡಿದ ವೀರನ ಮಗನಿಗೆ ತಂದೆಯ ಸ್ಥಾನದಲ್ಲಿ 'ಪೆರ್ಮಾಡಿ'ಯ ಅಧಿಕಾರವನ್ನು ನೀಡಿ ಆ ಅಧಿಕಾರಕ್ಕೆ ಸಂಬಂಧಿಸಿದಂತೆ ಧನ–ಧಾನ್ಯ ಗೌರವಗಳನ್ನು ಕಲ್ನಾಡಾಗಿ ಕೊಟ್ಟನು ಎಂದು ಇದಕ್ಕೆ ಅರ್ಥಮಾಡಬಹುದು. ನೂರು ಭತ್ತ ಎಂದಾಗ ಅಂದು ಪ್ರಚಲಿತವಿದ್ದ ಅಳೆಯುವ ಯಾವುದೋ ಸಾಧನದಲ್ಲಿ ನೂರು ಸಲ ಅಳೆದುಕೊಟ್ಟ ಭತ್ತವಿರಬಹುದು. ಶಾಸನವನ್ನು ಕಲ್ಲಿನಮೇಲೆ ಬರೆದವನು ಬೂವಯ್ಯ.

೭೪, ೯೦ ಮತ್ತು ೯೮ನೆಯ ನಂಬರಿನ ಮೂರು ಶಾಸನಗಳೂ ಗಂಗವಂಶದ ಅರಸರದ್ದು. ಇದರಲ್ಲಿ ೯೮ನೆಯ ಶಾಸನವನ್ನು ಮೇಲೆ ವಿವೇಚಿಸಿದ್ದೇವೆ. ಇದು ಇಮ್ಮಡಿ ಮಾರಸಿಂಹನ ಮಗನಾದ ನಾಲ್ಪಡಿ ರಾಚಮಲ್ಲನ ಶಾಸನ. ಈತನು ಕ್ರಿ. ಶ. ೯೭೪ರಿಂದ ೯೯೯ರ ವರೆಗೆ ಆಳಿದನು. ಈತನ ತಮ್ಮನಾದ ಶ್ರೀಮತ್ ರಕ್ಕಸ–ರಕ್ಕಸಗಂಗ–ನು ಬೆದ್ದೊಱಗರೆಯನ್ನು ಕ್ರಿ. ಶ. ೯೭೮ರಲ್ಲಿ ಆಳುತ್ತಿದ್ದನೆಂದು ಇದರಲ್ಲಿ ಹೇಳಿದೆ. 'ಶ್ರೀಪುರುಷಮಹಾರಾಜರ ದತ್ತಿ' ಎಂದು ಶಾಸನದಲ್ಲಿದೆ. ಇದು ಎರಡು ಶತಮಾನಗಳಿಗೂ ಹಿಂದೆ ಗಂಗರ ಶ್ರೀಪುರುಷನು ನೀಡಿದ ಮೂಲದತ್ತಿಯೊಂದಕ್ಕೆ ಅನ್ವಯಿಸಿದ್ದು, ಅದನ್ನು ಈಗ ಪುನರ್ದತ್ತಿ ಮಾಡಲಾಗಿದೆಯೇ ಎಂದು ಹೇಳುವುದು ಕಷ್ಟ. ೭೪ ಮತ್ತು ೯೦ನೆಯ ಶಾಸನಗಳು ಕ್ರಮವಾಗಿ ಎಱೆಯಪ್ಪ ಮತ್ತು ಕೊಂಗಣಿವರ್ಮರಿಗೆ ಸಂಬಂಧಿಸಿದುದಾಗಿವೆ. ಇವು ಸುಮಾರು ಕ್ರಿ. ಶ. ಹತ್ತನೆಯ ಶತಮಾನಕ್ಕೆ ಸೇರಿದವುಗಳೆಂದು ಅದರಲ್ಲಿನ ಲಿಪಿಗಳ ಆಧಾರದ ಮೇಲೆ ಹೇಳಬಹುದು. ಎಱೆಯಪ್ಪನು ಬೂತುಗ (I)ನ ಮಗ. ಕೊಂಗಣಿವರ್ಮನು ಯಾರೆಂದು ತಿಳಿಯದು. ಶಾಸನ ತ್ರುಟಿತವಾಗಿರುವುದರಿಂದ ಈ ಕುರಿತು ಯಾವುದನ್ನೂ ಸ್ಪಷ್ಟವಾಗಿ ಹೇಳಲು ಬಾರದು.

## ಬಾಣರು (?)

ಕ್ರಿ.ಶ. ೧೦೯೫ನೆಯ ವರ್ಷದ ಯೆಡೂರು (ನಂ. ೭೨) ಶಾಸನವನ್ನು ಕುರಿತು ಬರೆದಾಗ ರೈಸ್‌ರವರು ಆ ಶಾಸನದಲ್ಲಿ ಉಕ್ತವಾದ ಮಹಾಮಂಡಲೇಶ್ವರ ದುದ್ದರಸನೂ, ಸೋಮವಾರಪೇಟೆ ತಾಲ್ಲೂಕಿಗೆ ಹೊಂದಿದಂತಿರುವ ಹಾಸನ ಜಿಲ್ಲೆಯ ಮಂಜರಾಬಾದ್ ತಾಲ್ಲೂಕಿನ ಹಳೇ ಬೇಲೂರು ಗ್ರಾಮದ ಶಾಸನೋಕ್ತ ಮಹಾ[ರಾಜ ?] ದುದ್ಧರಸನೂ ಒಂದೇ ಎಂದೂ, ಇವನು ಕದಂಬ

ವಂಶಕ್ಕೆ ಸೇರಿದ ಮಂಡಳಿಕನೆಂದೂ ಸೂಚಿಸಿದ್ದಾರೆ. ಎರಡು ಶಾಸನಗಳ ತೇದಿಯೂ ಕ್ರಿ.ಶ. ೧೦೯೫ ಆಗಿರುವುದು ಮತ್ತು ಇಬ್ಬರ ಹೆಸರೂ ಒಂದೇ ಆಗಿರುವುದು ಈ ಊಹೆಗೆ ಕಾರಣಗಳು. ಆದರೆ ಈ ಊಹೆ ಸಮಂಜಸವಲ್ಲ.

ಮಂಜರಾಬಾದಿನ ಶಾಸನದಲ್ಲಿ ದುದ್ಧರಸನ ವಂಶಾವಳಿಯನ್ನು ಕೊಟ್ಟಿದ್ದು, ಅದು ಹೀಗಿದೆ:




ದಯಸಿಂಹನ ತಾಯಿಯಾದ ಮೇಚಲದೇವಿಯು ತಾನು ಕಟ್ಟಿಸಿದ ವಾಸುದೇವಾಲಯಕ್ಕೆ ಭೂಮಿ ಮುಂತಾದುವನ್ನು ದತ್ತಿಯಾಗಿ ನೀಡಿದಳೆಂದು ಆ ಶಾಸನ ಹೇಳುತ್ತದೆ. ಶಾಸನದ ಕಾಲ ಶಕವರ್ಷ ೧೦೧೭ನೆಯ ಸಂವತ್ಸರ, ಚೈತ್ರ ಶುದ್ಧ ಸಪ್ತಮಿ, ಬುಧವಾರ. ದುದ್ಧರಸನನ್ನು ಶಾಸನದಲ್ಲಿ 'ಬನವಾಸಿಪುರವರಾಧೀಶ್ವರ' ಮತ್ತು 'ಕದಂಬಕುಲಕಮಲಮಾರ್ತಂಡ'ನೆಂದು ವರ್ಣಿಸಿರುವುದರಿಂದ ಈತನು ಕದಂಬವಂಶಕ್ಕೆ ಸೇರಿದ ಮಾಂಡಲಿಕನೆಂದು ಖಚಿತವಾಗಿ ಹೇಳಬಹುದು.

ಆದರೆ ನಮ್ಮ ಶಾಸನ, ಈ ಶಾಸನ ಹುಟ್ಟಿದ ನಾಲ್ಕುತಿಂಗಳ ನಂತರ, ಅದೇ ವರ್ಷದ ಶ್ರಾವಣ ಶುದ್ಧ ದ್ವಿತೀಯ, ಭಾನುವಾರದಂದು ಹುಟ್ಟಿತು. ಇದರಲ್ಲಿ ದುದ್ದರಸನನ್ನು 'ತ್ರಿಪುರಾಧೀಶ್ವರ', 'ಬಲೀಂದ್ರಕುಲಕಮಲಮಾರ್ತ್ತಂಡ', 'ಬಲಿಯರ ಭೀಮ' ಎಂದು ವರ್ಣಿಸಲಾಗಿದೆ. ಈ ಬಿರುದುಗಳಾವುವೂ ಕದಂಬರಿಗೆ ಸಂಬಂಧಿಸಿದವುಗಳಲ್ಲ. ಬದಲು, ಇವುಗಳನ್ನು ಗಮನಿಸಿದರೆ ಈತನು ಬಾಣವಂಶಕ್ಕೆ ಸೇರಿದವನೆಂದು ಊಹಿಸಬಹುದು. ಅಲ್ಲದೆ ಶಾಸನ ದುದ್ದರಸನ ನೆನಪಿಗಾಗಿ ಹುಟ್ಟಿದೆಯಾದ ಕಾರಣ, ಆತನು ಶಾಸನ ಹುಟ್ಟುವ ಕೆಲದಿನಗಳಿಗೆ ಮೊದಲು ಗತಿಸಿರಬೇಕು. ಇನ್ನೊಂದು ಶಾಸನ ಇದಕ್ಕೂ ನಾಲ್ಕುತಿಂಗಳ ಹಿಂದಿನದಾಗಿದ್ದು, ಆ ವೇಳೆಗಾಗಲೇ ಆ ದುದ್ಧರಸನ ಮಗ ದಯಸಿಂಹನು ಆಳುತ್ತಿದ್ದುದು ಸ್ಪಷ್ಟವಿದೆ. ಶಾಸನದಲ್ಲಿ ಆತನ ತಾಯಿ ಮಾಡಿದ ದತ್ತಿಯನ್ನು ಉಲ್ಲೇಖಿಸಿದೆಯೇ ವಿನಹ ತಂದೆಯನ್ನು ಕುರಿತು ಅದರಲ್ಲಿ ಏನನ್ನೂ ಹೇಳಿಲ್ಲವಾದ ಕಾರಣ ಆತನ ತಂದೆ ಅದಕ್ಕೂ ಹಿಂದೆಯೇ ಮರಣಹೊಂದಿರಬೇಕು.

ಇನ್ನೂ ಒಂದು ವಾದ ಗಮನಾರ್ಹ. ನಮ್ಮ ಶಾಸನದಲ್ಲಿ ದುದ್ದರಸನು ಹಿಟ್ಟಿಯರಸ ಹಾಗೂ ಜುಂಜಲದೇವಿಯರ ಮಗನೆಂದು ಹೇಳಿದೆ. ಅಲ್ಲದೆ ಈತನ ಪತ್ನಿ ಚಿಕಲದೇವಿ. ಮಂಜರಾಬಾದ್ ಶಾಸನದಲ್ಲಿ ಹೇಳಲಾದ ದುದ್ಧರಸನ ತಂದೆಯ ಹೆಸರಾದ ಚಾಗಿಮಹಾರಾಜ ಎಂಬುದನ್ನು ಅವನ ತಂದೆಯ ಬಿರುದು ಎಂದು ಸಮಾಧಾನ ಹೇಳಿ ವಾದವನ್ನು ಬದಿಗೆ ಸರಿಸಲಾಗದು. ಆ ದುದ್ಧರಸನ ಮಗನ ಹೆಸರೂ ಚಾಗಿಮಹಾರಾಜನೆಂದಿದ್ದು ತನ್ನ ತಂದೆಯ ಹೆಸರನ್ನೇ ಮಗನಿಗೆ ಇಟ್ಟಿರಬೇಕು. ಇವುಗಳನ್ನು ಪರಿಶೀಲಿಸಿದಾಗ ೬೦ನೆಯ ಶಾಸನದ ದುದ್ದರಸನು ಕದಂಬವಂಶದವನಾಗಿರಲಿಲ್ಲ; ಬಾಣವಂಶಕ್ಕೆ ಸೇರಿರಬಹುದು ಎಂದು ಹೇಳಬಹುದು.

## ಕೊಂಗಾಳ್ವರು

ಕ್ರಿ. ಶ. ಹತ್ತನೆಯ ಶತಮಾನದ ಅಂತ್ಯದ ವೇಳೆಗೆ ಚೋಳವಂಶದ ರಾಜರಾಜಚೋಳನು ಗಂಗವಾಡಿಯನ್ನು ಗೆದ್ದುಕೊಂಡಾಗ ಕೊಡಗಿನ ರಾಜಕೀಯಪರಿಸ್ಥಿತಿ ಬದಲಾಯಿತು. ಈ ಪ್ರದೇಶವನ್ನು ಚೋಳರು ಸ್ವಾಧೀನಮಾಡಿಕೊಳ್ಳದೆ ಇಲ್ಲಿ ಕೊಂಗಾಳ್ವರೆಂಬ ಮನೆತನದವರು ಮಾಂಡಲಿಕರಾಗಿ ಆಳಲು ಅನುಮತಿಯನ್ನು ನೀಡಿದ್ದರು. ೬೫ನೆಯ ಶಾಸನದಲ್ಲಿ ಈ ಕೊಂಗಾಳ್ವರು ಅಧಿಕಾರಕ್ಕೆ ಬಂದ ಪರಿಸ್ಥಿತಿಯನ್ನು ವಿವರಿಸಿದೆ. 'ಕವೇರಕನ್ಯಕಾಸಖೀಯಮಾನ ಚೋಳಮಹಾಮಹೀಪತಿ' ಎನಿಸಿದ ರಾಜಕೇಸರಿವರ್ಮ್ಮ ಪೆರ್ಮ್ಮಾನಡಿಯು, ಅಂದರೆ ರಾಜರಾಜನು, ಪನಸೋಗೆಯ ಕಾಳಗದಲ್ಲಿ ಶತ್ರುಗಳನ್ನು ಸೋಲಿಸಿ, ಕೊಲ್ಲುವವರೆಗೂ ಕಾದಿದ ಮನಿಜನೆಂಬುವನ ಶೌರ್ಯವನ್ನು ಕೇಳಿ ತಿಳಿದು, ಅವನಿಗೆ ಪಟ್ಟವನ್ನು ಕಟ್ಟಿ, ನಾಡನ್ನು ಕೊಡು ಎಂದು ಪಂಚವನ್‌ಮಹಾರಾಯನಿಗೆ ಆದೇಶಮಾಡಿದನು. ಅದರಂತೆ ಆ ಸೇನಾಧಿಪತಿಯಾದ ಪಂಚವನ್ ಮಹಾರಾಯನು ಮನಿಜನಿಗೆ 'ಕ್ಷತ್ರಿಯಶಿಖಾಮಣಿಕೊಂಗಾಳ್ವ'ನೆಂಬ ಬಿರುದನ್ನಿತ್ತು, ಮಾಲವ್ವಿ(ಈಗಿನ ಸೋಮವಾರಪೇಟೆ ತಾಲ್ಲೂಕಿನ ಮಾಲಂಬಿ)ಯನ್ನು ಇತ್ತನು. ಈ ಪಂಚವನ್ ಮಹಾರಾಯನು ಚೋಳಯುವರಾಜನಾಗಿದ್ದ ರಾಜರಾಜ(I)ನ ಮಗನಾದ ರಾಜೇಂದ್ರ ಚೋಳನೆಂದು ಊಹಿಸಲಾಗಿದೆ. ಪನಸೋಗೆಯ ಕದನ ಸುಮಾರು ಕ್ರಿ.ಶ. ೧೦೦೪ಗಲ್ಲಿ ನಡೆದಿರಬಹುದಾದ ಕಾರಣ, ಕೊಂಗಾಳ್ವರ ಆಳಿಕೆಯೂ ಅಂದಿನಿಂದಲೇ ಆರಂಭವಾಯಿತೆಂದು ಹೇಳಬಹುದು. ಕಾವೇರಿಯು ಕವೇರ ಮಹರ್ಷಿಯ ಮಗಳೆಂದೂ, ಸಮಸ್ತ ಜನರ ಪಾಪಗಳನ್ನು ನಿವಾರಿಸುವಳೆಂದೂ, ಈ ನದಿಯ ಕುರಿತಾದ ಪೌರಾಣಿಕ ಕಲ್ಪನೆಯು ಕ್ರಿ.ಶ. ೧೧ನೆಯ ಶತಮಾನದಲ್ಲಿಯೇ

ರೂಢಿಯಲ್ಲಿತ್ತೆಂಬುದು ಈ ಶಾಸನದಿಂದ ಸಿದ್ಧವಾಗುತ್ತದೆ. ಈ ಶಾಸನದಲ್ಲಿ ಸಾಕ್ಷಿಗಳೆಂದು ಹೆಸರಿಸಲಾದ ಗಾವುಂಡ ರಾಚಮ್ಮ, ನನ್ನಿಯ ಮೇರು, ನಲ್ಲೂರು ಎರೆಯಂಗಗಾವುಂಡ ಮುಂತಾದವರ ಹೆಸರುಗಳು, ಅದುವರೆವಿಗೂ ಅಲ್ಲಿನ ಪ್ರಜೆಗಳು ಗಂಗರಿಗೆ ನಿಷ್ಠರಾದ ಪ್ರಜೆಗಳಾಗಿದ್ದರೆಂಬುದನ್ನು ಸೂಚಿಸುವುದು. ಮನಿಜನ ಅಧೀನಕ್ಕೆ ಬಂದ ಪ್ರದೇಶವು ಮಾಲಂಬಿಯ ಸುತ್ತಲಿನ ಏಳುಸಾವಿರ ಸೀಮೆಯಾಗಿತ್ತೆಂದು ತೋರುತ್ತದೆ. ಇದು ೯ನೆಯ ಶತಮಾನದಲ್ಲಿ ಗಂಗರ ಯುವರಾಜ ಎಱೆಯಪ್ಪನ ಆಳಿಕೆಗೊಳಪಟ್ಟ ಪ್ರದೇಶವೇ ಆಗಿತ್ತು.

ಕೊಂಗಾಳ್ವರ ವಂಶಾವಳಿಯನ್ನು ರೈಸ್‌ರವರು ಈ ಕೆಳಕಂಡಂತೆ ರೂಪಿಸಿದ್ದಾರೆ. ಅವರ ಮೊದಲನೆಯ ಸಂಪುಟದ ಪೀಠಿಕೆಯ ಪುಟ ೧೭–೧೮ನ್ನು ನೋಡಿ.

ರಾಜೇಂದ್ರಚೋಳ ಕೊಂಗಾಳ್ವ (ಕ್ರಿ.ಶ. ೧೦೨೬)

|

ರಾಜಾಧಿರಾಜ (ತಾಯಿ ಪೋಚಬ್ಬರಸಿ)

|

ರಾಜೇಂದ್ರ (೧೦೫೮)

|

ರಾಜೇಂದ್ರ ಪ್ರಿಥುವೀ ಕೊಂಗಾಳ್ವ (೧೦೬೬–೧೧೦೦)
(ಅದಟರಾದಿತ್ಯ ; ತ್ರಿಭುವನಮಲ್ಲಚೋಳಕೊಂಗಾಳ್ವ)

⋮

ವೀರಚೋಳ ಕೊಂಗಾಳ್ವ (೧೧೨೬)

ಆದರೆ ಕೊಡಗು ಜಿಲ್ಲೆಯ ಶಾಸನಗಳನ್ನು ವಿಶ್ಲೇಷಿಸಿದಾಗ ಈ ವಂಶಾವಳಿ ದೋಷಪೂರಿತವೆಂದು ತೋರುತ್ತದೆ.

ಈ ಸಂಪುಟದ ೬೬ನೆಯ ನಂಬರಿನ ಶಾಸನ ಒಬ್ಬ ಕೊಂಗಾಳ್ವನ ಆಳಿಕೆಗೆ ಸೇರಿದ್ದುದಾಗಿದೆ. ತೇದಿಯಿಲ್ಲದ, ಸುಮಾರು ೧೧ನೆಯ ಶತಮಾನದ ಈ ಶಾಸನದಲ್ಲಿ ಕೊಂಗಾಳ್ವನ ಹೆಸರಿನ ಹಿಂದೆ ಯಾವ ಚೋಳನ ಹೆಸರೂ ಸೇರಿಸಿಲ್ಲ. ೧೦೨೬ನೆಯ ವರ್ಷದ ಅರಕಲಗೂಡು ತಾಲ್ಲೂಕಿನ ಶಾಸನವೊಂದರಲ್ಲಿ (E.C., Vol. V Ag. 76) ರಾಜೇಂದ್ರಚೋಳ ಕೊಂಗಾಳ್ವನು ಹೊಯ್ಸಳನೆಂಬುವನನ್ನು ಸೋಲಿಸಿದನೆಂದು ಇದೆ. ೧೦೫೮ನೆಯ ವರ್ಷದ ಮುಳ್ಳೂರಿನ ಶಾಸನ (ನಂಬರ್ ೨೦) ತನ್ನ ತಂದೆ ಕಟ್ಟಿಸಿದ ಬಸದಿಗೆ ರಾಜೇಂದ್ರಚೋಳನು ಕೊಟ್ಟ ದತ್ತಿಯ ವಿವರಗಳನ್ನೊಳಗೊಂಡಿದೆ. ತಂದೆಯ ಹೆಸರು ಹೇಳಿಲ್ಲ. ಅದೇ ಮುಳ್ಳೂರು ಗ್ರಾಮದ ಪಾರ್ಶ್ವನಾಥ ಬಸದಿಯ ಗೋಡೆಯ ಮೇಲಿರುವ ಶಾಸನ(ನಂ. ೬೮)ದಲ್ಲಿ ರಾಜಾಧಿರಾಜ ಕೊಂಗಾಳ್ವನ ತಾಯಿಯಾದ ಪೋಚಬ್ಬರಸಿ ಆ ಬಸದಿಯನ್ನು ಕಟ್ಟಿಸಿದುದಾಗಿ ಹೇಳಿದೆ. ಅದೇ ಬಸದಿಯ ತಳಪಾಯದ ಕಲ್ಲಿನ ಮೇಲಿರುವ ಶಾಸನ (ನಂ. ೯೯)ದಿಂದ ರಾಜಾಧಿರಾಜ ಕೊಂಗಾಳ್ವನು ರಾಜೇಂದ್ರಚೋಳ ಕೊಂಗಾಳ್ವನ ಪುತ್ರನೆಂದೂ, ಈ 'ವಾಸಸ್ಥಾನ'ವನ್ನು ತಿವುಳಿಗಣ, ಅರುಂಗಳಾನ್ವಯ, ನಂದಿಸಂಘದ ಗುಣಸೇನಪಂಡಿತನಿಗೆ ಧಾರಾಪೂರ್ವಕವಾಗಿ ಕೊಟ್ಟನೆಂದೂ ತಿಳಿದು ಬರುತ್ತದೆ. ಈತನು ರಾಜಾಧಿರಾಜ ಕೊಂಗಾಳ್ವನ ತಾಯಿಯಾದ ಪೋಚಬ್ಬರಸಿಯ ಗುರುವೆಂದು ೬೮ನೆಯ ಶಾಸನದಲ್ಲಿ ಹೇಳಿದೆ. ಆದ್ದರಿಂದ ರಾಜಾಧಿರಾಜ ಕೊಂಗಾಳ್ವನು ರಾಜೇಂದ್ರಚೋಳ ಕೊಂಗಾಳ್ವನ ಮಗನೆಂದು ನಿರ್ಣಯಿಸಬಹುದು.

೧೦೨೬ನೆಯ ವರ್ಷದ ಮತ್ತು ೧೦೫೮ನೆಯ ವರ್ಷದ ಶಾಸನಗಳೆರಡರಲ್ಲಿಯೂ ಉಲ್ಲೇಖವಾಗಿರುವ ರಾಜೇಂದ್ರಚೋಳ ಕೊಂಗಾಳ್ವನು ಒಬ್ಬನೇ ಇರಬಹುದೇ? ಬಸದಿಯು ೧೦೫೭ಕ್ಕೂ ಮೊದಲೇ, ಸುಮಾರು ೧೦೫೦ರ ವೇಳೆಗೆ, ಕಟ್ಟಲ್ಪಟ್ಟಿತೆಂದು ಊಹಿಸಿದಲ್ಲಿ, ಆ ವೇಳೆಗೆ ರಾಜೇಂದ್ರಚೋಳ ಕೊಂಗಾಳ್ವನ ತಂದೆ ಜೀವಿಸಿದ್ದ. ಆತನ ಹೆಸರು ಗೊತ್ತಿಲ್ಲ. ಆದರೆ ರಾಜೇಂದ್ರ ಚೋಳನ ಮಗನ ಹೆಸರು ರಾಜಾಧಿರಾಜನೆಂದಿದೆಯಾದ ಕಾರಣ, ತಂದೆಯ ಹೆಸರನ್ನೇ ಮಗನಿಗೂ ಇಡುವ ಅಂದಿನ ಪದ್ಧತಿಯನ್ನು ಅವರು ಅನುಸರಿಸಿದರೆಂದು ಹೇಳಬಹುದು. ಇವರು ಚೋಳರ ಮಾಂಡಲಿಕರಾಗಿದ್ದು, ತಮಗೆ ಅಧಿಪತಿಯಾದ ಚೋಳ ಅರಸನ ಹೆಸರಿನಂತೆಯೇ ತಮ್ಮ ಹೆಸರನ್ನೂ ಇಟ್ಟುಕೊಳ್ಳುವುದು ಸಹ ಅಂದಿನ ಪದ್ಧತಿಯಾಗಿತ್ತು. ೧೦೫೦ರಲ್ಲಿ ರಾಜಾಧಿರಾಜನು ಚೋಳರ ಅರಸನಾಗಿದ್ದ ಕಾರಣ ರಾಜೇಂದ್ರಚೋಳ ಕೊಂಗಾಳ್ವನ ತಂದೆಗೂ ರಾಜಾಧಿರಾಜನೆಂದೇ ಹೆಸರಿಟ್ಟಿತ್ತೆಂಬ ನಮ್ಮ ಊಹೆ ದೃಢಪಡುತ್ತದೆ. ೧೦೬೬ರಲ್ಲಿ ಇನ್ನೊಬ್ಬ ರಾಜೇಂದ್ರಚೋಳ ಕೊಂಗಾಳ್ವನು ಆಳುತ್ತಿದುದರಿಂದ, ಬಹುಶಃ ಈತನು ಆ ರಾಜಾಧಿರಾಜನ ತಂದೆಯಾಗಿರಬಹುದು. ಆದರೆ ಇದೊಂದು ಊಹೆ ಮಾತ್ರ.

ರಾಜೇಂದ್ರಚೋಳ(II)ನ ನಂತರದ ವಂಶಾವಳಿಯಲ್ಲಿ ಹೆಚ್ಚು ತೊಡಕಿಲ್ಲ. ಈತನ ಪತ್ನಿ ಪೋಚಬ್ಬರಸಿ, ಮಗ ರಾಜಾಧಿರಾಜ. ೧೧ನೆಯ ಶತಮಾನದ ಶಾಸನ (ನಂ. ೬೦)ದಲ್ಲಿ ಮುಳ್ಳೂರಿನ ಬಸದಿಯಲ್ಲಿ ರುಗ್ಮಿಣೀದೇವಿಯು ಬಹುಶಃ ಒಂದು

ವಿಗ್ರಹವನ್ನು ಪ್ರತಿಷ್ಠಾಪಿಸುವುದನ್ನು ಕುರಿತು ಉಲ್ಲೇಖವಿದೆ. ಸುಮಾರು ಮೂರು ಶತಮಾನಗಳ ನಂತರ, ಕ್ರಿ.ಶ. ೧೩೯೦ನೆಯ ವರ್ಷದ ಶಾಸನದಲ್ಲಿ (ನಂ. ೨೫), ಈಕೆಯ ಹೆಸರನ್ನು ರಾಜಾಧಿರಾಜ ಕೊಂಗಾಳ್ವನ ಹೆಸರಿನ ಜೊತೆಯಲ್ಲಿ ಪ್ರಸ್ತಾಪಿಸಲಾಗಿದೆ. ಈಕೆ ಬಹುಶಃ ಆ ರಾಜಾಧಿರಾಜಕೊಂಗಾಳ್ವನ ಪತ್ನಿಯಾಗಿರಬಹುದು.

ಕ್ರಿ. ಶ. ೧೦೨೦ನೆಯ ವರ್ಷದ ೪೮ ಮತ್ತು ೪೯ನೆಯ ಶಾಸನಗಳಲ್ಲಿ ರಾಜೇಂದ್ರ ಪ್ರಿಥುವೀ ಕೊಂಗಾಳ್ವನು ಹೆಸರಿಸಲ್ಪಟ್ಟಿದ್ದಾನೆ. ೧೦೨೨ ನೆಯ ವರ್ಷದ ಶಾಸನವು (ನಂ. ೮೧) ರಾಜೇಂದ್ರಚೋಳ ಕೊಂಗಾಳ್ವನದಾಗಿದೆ. ಬಹುಶಃ ಇವೆರಡೂ ಒಬ್ಬನಿಗೆ ಅನ್ವಯಿಸುತ್ತವೆ. ಈತನು ಇಮ್ಮಡಿ ರಾಜಾಧಿರಾಜನ ಉತ್ತರಾಧಿಕಾರಿ. ಈತನ ಪತ್ನಿ ಪದ್ಮಲದೇವಿ. ತೇದಿಯಿಲ್ಲದ ಒಡೆದು ಹೋದ ಶಾಸನ(ನಂ. ೨೩) ದಲ್ಲಿ ಒಬ್ಬ ಪ್ರಿಥುವೀಕೊಂಗಾಳ್ವನು ಕಂಡುಬರುತ್ತಾನೆ. ಈತನೂ ಸಹ ರಾಜೇಂದ್ರಚೋಳ ಪ್ರಿಥುವೀ ಕೊಂಗಾಳ್ವನೇ ಆಗಿರಬಹುದು. ಇವನಿಗೆ ಅದಟರಾದಿತ್ಯ, ತ್ರಿಭುವನಮಲ್ಲಚೋಳ ಕೊಂಗಾಳ್ವ ಎಂಬ ಹೆಸರುಗಳೂ ಇದ್ದುವೆಂದು ರೈಸ್‌ರವರು ಹೇಳಿದ್ದಾರೆ. ಆದರೆ ಇದು ಇನ್ನೂ ಖಚಿತವಾಗಿಲ್ಲ.

ಕ್ರಿ.ಶ. ೧೧೨೫ನೆಯ ನಂ. ೮೭ನೆಯ ಶಾಸನ ಮಹಾಮಂಡಲೇಶ್ವರ ವೀರಚೋಳ ಕೊಂಗಾಳ್ವನ ಆಳಿಕೆಗೆ ಸೇರಿದುದು. ಕೊಂಗಾಳ್ವರಲ್ಲಿ ಇದುವರೆಗೆ ತಿಳಿದಂತೆ ಕೊನೆಯ ಸಾಮಂತನಿವನು. ೫೩ನೆಯ ಶಾಸನದಲ್ಲಿ ಹೆಸರಿಸಲಾದ ವೀರಚೋಳ ಕೊಂಗಾಳ್ವನೂ ಇವನೇ ಆಗಿದ್ದಿರಬೇಕು. ೧೨ನೆಯ ಶತಮಾನದ ಆ ಶಾಸನ ಒಡೆದಿದ್ದು, ಅದರಲ್ಲಿ ಮನ್ಮಥ ಸಂವತ್ಸರದ ಉಲ್ಲೇಖವಿದೆ. ಇದೂ ಕ್ರಿ.ಶ. ೧೧೨೫ನೆಯ ವರ್ಷಕ್ಕೆ ಸೇರಿದೆ ಎನ್ನಬಹುದು.

೮೭ನೆಯ ಶಾಸನದಲ್ಲಿ ತಾಯಿ ಪದುಮಲದೇವಿ ಸೋಮಲದೇವಿ ಮತ್ತು ಇತರರು ದತ್ತಿಗೆ ಸಂಬಂಧಿಸಿದವರೆಂದು ಹೇಳಿದೆ. ಈ ವೇಳೆಗೆ ಕೊಡಗು ಪ್ರದೇಶ ಹೊಯ್ಸಳರ ಅಧೀನಕ್ಕೆ ಬಂದಿದ್ದು ಕೊಂಗಾಳ್ವರು ಅವರ ಸಾಮಂತರಾಗಿದ್ದರು. ಹೊಯ್ಸಳ ಇಮ್ಮಡಿ ಬಲ್ಲಾಳನ ಪತ್ನಿ ಹಾಗೂ ಪುತ್ರಿಯರ ಹೆಸರೂ ಕ್ರಮವಾಗಿ ಪದುಮಲದೇವಿ ಮತ್ತು ಸೋಮಲದೇವಿ ಎಂದಿದೆಯಾದ ಕಾರಣ ಮೇಲಿನ ಶಾಸನದಲ್ಲಿ ಉಕ್ತವಾದ ಇಬ್ಬರೂ ಹೊಯ್ಸಳ ರಾಣಿ ಹಾಗೂ ರಾಜಕುಮಾರಿಯರು ಎಂದು ರೈಸ್ ಯೋಚಿಸಿದ್ದರು. ಆದರೆ ಇದು ಅನುಮಾನಾಸ್ಪದ. ಸಾರ್ವಭೌಮನ ಪತ್ನಿ ಹಾಗೂ ಪುತ್ರಿಯರಾದ ಇವರು ಸಾಮಂತನೊಬ್ಬನ ಶಾಸನದಲ್ಲಿ ಹೆಸರಿಸಲ್ಪಟ್ಟಾಗ ಯಾವ ಬಿರುದುಗಳನ್ನೂ ಪಡೆಯದೆ ಕೇವಲ ಅವರ ಹೆಸರನ್ನಷ್ಟೆ ಹೇಳಿರುವುದು ಈ ಸಂದೇಹಕ್ಕೆ ಆಸ್ಪದವನ್ನೀಯುತ್ತದೆ. ಅಲ್ಲದೆ ಪದುಮಲದೇವಿ ಎಂಬುದು ಅಂದು ಪ್ರಚಲಿತವಾಗಿದ್ದ ಸಾಮಾನ್ಯವಾದ ಹೆಸರು. ರಾಜೇಂದ್ರಚೋಳ ಕೊಂಗಾಳ್ವನ ಪತ್ನಿಯ ಹೆಸರೂ ಪದ್ಮಲದೇವಿ ಎಂದಿತ್ತು ಎಂಬುದನ್ನು ಮೇಲೆ ಗಮನಿಸಿದ್ದೇವೆ.

ಈ ಎಲ್ಲ ಚರ್ಚೆಯಿಂದ ಕೊಂಗಾಳ್ವರ ವಂಶಾವಳಿಯನ್ನು ಹೀಗೆ ನಿರೂಪಿಸಬಹುದು.




## ಚಂಗಾಳ್ವರು

ಕೊಂಗಾಳ್ವರಂತೆಯೇ ಚಂಗಾಳ್ವರು ಸಹ ಕೊಡಗು ಜಿಲ್ಲೆಯ ಕೆಲಭಾಗಗಳನ್ನು ಆಳುತ್ತಿದ್ದರು. ಮಾಲಂಬಿ ಶಾಸನ (ನಂ. ೨೫)ದಲ್ಲಿ ಚಂಗಾಳ್ವರು ಚೋಳರಿಂದ ಸೋಲಿಸಲ್ಪಟ್ಟರೆಂದು ರೈಸ್‌ರವರು ಭಾವಿಸಿದಂತೆ ಹೇಳಿಲ್ಲವಾದರೂ, ಕೊಡಗು, ಹಾಸನ ಮತ್ತು ಮೈಸೂರು ಜಿಲ್ಲೆಗಳಲ್ಲಿ ಈ ಮನೆತನಗಳವರು ಆಳುತ್ತಿದ್ದ ಭಾಗಗಳನ್ನು ಚೋಳರು ವಶಮಾಡಿಕೊಂಡರೆಂಬುದು ಸಮಂಜಸವಾದ ಊಹೆ. ಇದುವರೆಗೆ ತಿಳಿದ ಮೊತ್ತಮೊದಲನೆಯ ಚಂಗಾಳ್ವ–ನನ್ನಿಚಂಗಾಳ್ವ–ನು ಚೋಳನೆಂಬ ಅಭಿದಾನವನ್ನು ಹೊಂದಿದ್ದು ರಾಜೇಂದ್ರಚೋಳನಾಗಿದ್ದಾನೆ. ಪ್ರಸ್ತುತ ಈ ಸಂಪುಟದಲ್ಲಿ ನೇರವಾಗಿ ವಂಶದವರಿಗೆ ಸೇರಿದ ೭ ಶಾಸನಗಳಿದ್ದು, ಅವು

ಇತರ ವಂಶಾವಳಿ ಅಥವಾ ಆಳಿಕೆಯ ಕಾಲಸೂಚಿಗಳನ್ನು ಪುನರ್ರಚಿಸಲು ಸಹಾಯಕವಾಗಿಲ್ಲ. ಸಂಬಂಧವಿಲ್ಲದ ಕೆಲವು ಹೆಸರುಗಳು ಮಾತ್ರ ದೊರಕುತ್ತವೆ. ಶಾಸನದ ಕಲ್ಲುಗಳು ಒಡೆದಿರುವುದರಿಂದ ಅಳಿದುಳಿದ ಆ ಶಾಸನಗಳಲ್ಲಿ ಕಾಲಕ್ಕೆ ಸಂಬಂಧಿಸಿದ ಅಥವಾ ಇತರ ಯಾವ ಅವಶ್ಯಕವಾದ ವಿವರಗಳೂ ಸಂಪೂರ್ಣವಾಗಿ ಸಿಗುವುದಿಲ್ಲ.

ನಂ. ೯೧ ಒಂದು ತುಂಡು ಶಾಸನ. ಇದರಲ್ಲಿ ನಮೂದಿಸಲಾದ ಮಹಾಮಂಡಲೇಶ್ವರ ತ್ರಿಭುವನಮಲ್ಲವೀರ .......... ಚಂಗ ....... ನೇ ಈ ಸಂಪುಟದಲ್ಲಿ ಉಕ್ತವಾಗಿರುವ ಚಂಗಾಳ್ವರಲ್ಲಿ ಪ್ರಥಮನು. ೧೨ನೆಯ ಶತಮಾನದ ಈ ಶಾಸನದಲ್ಲಿ ಈತನ ಸಂಪೂರ್ಣವಾದ ಹೆಸರಾಗಲೀ, ತೇದಿಯ ವಿವರಗಳಾಗಲೀ ಲಭ್ಯವಿಲ್ಲ. ತ್ರಿಭುವನಮಲ್ಲ ಎಂಬುದು ಹೆಸರಿನ ಭಾಗವಾಗಿರದಿದ್ದರೆ ಬಿರುದಾಗಿರಬಹುದು.

೧೩ನೆಯ ಶತಮಾನದ ಶಾಸನಗಳಲ್ಲಿ ಈ ವಂಶದ ಮುನಿವರಾದಿತ್ಯ, ಮಲ್ಲಿದೇವ ಮತ್ತು ಹರಿಹರದೇವ ಎಂಬ ಮೂವರು ಮಾಂಡಲಿಕರ ಹೆಸರುಗಳಿವೆ. ೩೭ನೆಯ ನಂಬರಿನ ಶಾಸನ ಸಹ ಒಡೆದುಹೋಗಿದೆ. ಇದರಲ್ಲಿ ಮುನಿವರಾದಿತ್ಯ ಎಂಬ ಹೆಸರು ಎರಡು ಸಲ ಉಕ್ತವಾಗಿದೆ. ಒಮ್ಮೆ ಅದು 'ಚಂಗಾಳುವ' ಎಂಬ ಹೆಸರಿನೊಡನೆ ಕೂಡಿಕೊಂಡಿದೆ. ಈ ಮುನಿವರಾದಿತ್ಯನು ಚಂಗಾಳ್ವನಾಗಿರಬಹುದೆಂದು, ಸಂದೇಹಾಸ್ಪದವಾಗಿಯೇ ಊಹಿಸಬಹುದು. ೫೦ ಮತ್ತು ೫೧ನೆಯ ಶಾಸನಗಳೂ ಅಷ್ಟೆ. ಇವೆರಡರಲ್ಲಿಯೂ ಮಲ್ಲಿದೇವ ಮತ್ತು ಹರಿಹರದೇವರು ನಮೂದಿಸಲ್ಪಟ್ಟಿದ್ದಾರೆ. ಇವರು ಚಂಗಾಳ್ವರೆಂದು ಅಭಿಪ್ರಾಯ ಪಡಲಾಗಿದೆ. ಮಲ್ಲಿದೇವನನ್ನು ೧೨೮೦ನೆಯ ವರ್ಷದ ನಾರಣಪುರದ ಶಾಸನದಲ್ಲಿ (E.C., V. Bl. 89) ಮಹಾಮಂಡಲೇಶ್ವರ ಕುಲೋತ್ತುಂಗಚೋಳ ಶ್ರೀ ವೀರಚಂಗಾಳ್ವನೆಂದು ಕರೆಯಲಾಗಿದೆ. ಈ ಸಂಪುಟದ ಶಾಸನಗಳಲ್ಲಿ ಮಲ್ಲಿದೇವ ಮತ್ತು ಹರಿಹರದೇವರಿಬ್ಬರೂ ಜೊತೆಯಾಗಿಯೇ ಇದ್ದಾರೆ. ೧೨೯೭ನೆಯ ವರ್ಷದ ಶಾಸನದಲ್ಲಿ (ನಂ. ೮೦) ಮಾತ್ರ ಹರಿಹರದೇವನೊಬ್ಬನೇ ಆಳುತ್ತಿದ್ದುದಾಗಿ ಹೇಳಿದೆ. ಇದರಿಂದ ಈತನು ಮಲ್ಲಿದೇವನ ಮಗನಾಗಿದ್ದು, ತಂದೆಯ ಆಳಿಕೆಯ ಕೊನೆಯ ವರ್ಷಗಳಲ್ಲಿ ಅವನೊಡನೆ ತಾನೂ ರಾಜ್ಯವಾಳತೊಡಗಿದಂತೆ ತೋರುತ್ತದೆ. ೮೦ನೆಯ ಈ ಶಾಸನದಲ್ಲಿ ಇವನನ್ನು ಹರಿಹರದೇವ ಚೋಳದೇವನೆಂದು ಕರೆಯಲಾಗಿದೆ. ತ್ರುಟಿತವಾದ ೭೦ನೆಯ ನಂಬರಿನ ಶಾಸನ ಸಹ ಬಹುಶಃ ಈತನದೇ ಆಗಿರಬಹುದು.

೨೫೦ ವರ್ಷಗಳ ನಂತರ ಕ್ರಿ.ಶ. ೧೫೪೪ನೆಯ ವರ್ಷದಲ್ಲಿ ಈ ಮನೆತನದ ಶ್ರೀಕಂಠರಸನೆಂಬೊಬ್ಬನು ಕೊಡಗಿನಲ್ಲಿ ಆಳುತ್ತಿದ್ದುದು ಚೇರಲ ಸಿರಿಮಂಗಲದ (ನಂ. ೩೫) ಶಾಸನದಲ್ಲಿ ಕಂಡುಬರುತ್ತದೆ. ಈ ಸಂಪುಟಕ್ಕೆ ಸಂಬಂಧಿಸಿದಂತೆ ಚಂಗಾಳ್ವ ಮನೆತನದ ಕೊನೆಯ ಮಾಂಡಲಿಕನಿವನು. ಇದರಿಂದ ಆರು ಶತಮಾನಗಳಷ್ಟು ಕಾಲ ಈ ಪ್ರದೇಶದಲ್ಲಿ ಅನೇಕ ರಾಜಕೀಯ ಬದಲಾವಣೆಗಳಾದರೂ, ಚಂಗಾಳ್ವರು ಮಾತ್ರ ತಮ್ಮ ಸಾಮಂತ ಪದವಿಯನ್ನು ಕಾಪಾಡಿಕೊಂಡು ಬಂದರೆಂಬುದು ವ್ಯಕ್ತವಾಗುತ್ತದೆ.

## ಹೊಯ್ಸಳರು

ಕೊಡಗು ಜಿಲ್ಲೆಯು ಹೊಯ್ಸಳರ ಆಳ್ವಿಕೆಗೆ ಅಧೀನವಾಗಿತ್ತೆಂಬುದು ನಿಜವಾದರೂ ಅವರಿಗೇ ನೇರವಾಗಿ ಸಂಬಂಧಿಸಿದ ಶಾಸನಗಳು ಇಲ್ಲಿ ಅತಿ ವಿರಳ. ಸಿರಹ ಗ್ರಾಮದಲ್ಲಿನ ೯೩ನೆಯ ವೀರಗಲ್ಲಿನ ಶಾಸನ ಅವುಗಳಲ್ಲಿ ಒಂದು. ೧೧೭೫ನೆಯ ವರ್ಷದ ಈ ಶಾಸನ ಹೊಯ್ಸಳ ಭುಜಬಳ ವೀರಬಲ್ಲಾಳದೇವ, ಅಂದರೆ ಇಮ್ಮಡಿ ಬಲ್ಲಾಳನದು. ಸಿರಿಪುರದ ಮಲ್ಲಿಕಾರ್ಜುನನಿಗೆ ನೀಡಿದ ದತ್ತಿಯ ಉಲ್ಲೇಖ ಇದರಲ್ಲಿದೆ. ಶಾಸನದ ಕೊನೆಯಲ್ಲಿ 'ಶ್ರೀಮಜಿತವೊಕ್ಕರಕಾವರು' ಎಂಬ ಅಂಕಿತವಿದ್ದು ಇದು ಅರಸನ ಮೊಹರಾಗಿದೆ. ಸಿರಹಗ್ರಾಮ ಬಿಳುಹುನಾಡಿನಲ್ಲಿತ್ತೆಂದು ಈ ಶಾಸನದಿಂದ ತಿಳಿದುಬರುತ್ತದೆ. ೪೨ನೆಯ ನಂಬರಿನ ಶಾಸನವೂ ಇದೇ ಅರಸನಿಗೆ ಸೇರಿದೆ. ಹೆಗ್ಗಡಹಳ್ಳಿಯಲ್ಲಿರುವ ಈ ವೀರಗಲ್ಲಿನಲ್ಲಿ ಸಾಧಾರಣವಾಗಿ ಎಲ್ಲೂ ಕಂಡುಬರುವಂತೆ ಮೂರು ಅಂಕಣಗಳಿದ್ದು, ವೀರನು ಕಾದುತ್ತಿರುವ, ಸ್ವರ್ಗಕ್ಕೆ ಏರುತ್ತಿರುವ ಹಾಗೂ ಕೈಲಾಸದಲ್ಲಿ ಕುಳಿತಿರುವ, ದೃಶ್ಯಗಳಿದ್ದರೂ, ಪ್ರತಿ ಅಂಕಣದ ನಡುವಣ ಪಟ್ಟಿಗಳು ಮಾತ್ರ ಇದರಲ್ಲಿಲ್ಲ. ಶಾಸನ ಸಾಮಾನ್ಯವಾಗಿ ಈ ಪಟ್ಟಿಗಳಲ್ಲಿರುತ್ತಿತ್ತು. ಆದರೆ ಇದರಲ್ಲಿ ಶಾಸನವನ್ನು ಕಲ್ಲಿನ ಹಿಂಭಾಗದಲ್ಲಿ ಕೊರೆಯಲಾಗಿದೆ. ಆ ವಿಧದಲ್ಲಿ ಇದೊಂದು ಅಪರೂಪವಾದ ವೀರಗಲ್ಲು. ಹೊಯ್ಸಳ ಅರಸನಿಗೆ ಯಾದವ ಕುಲಾಂಬರದ್ಯುಮಣಿ, ಸಂಮ್ಯಕ್ತ ಚೂಡಾಮಣಿ, ಮಲರಾಜರಾಜ, ಮಲಪರೊಳುಗಂಡ, ಗಂಡಭೇರುಂಡ, ಕದನಪ್ರಚಂಡ, ಅಸಹಾಯಶೂರ, ಯೇಕಾಂಗವೀರ, ಸನಿವಾರಸಿದ್ಧಿ, ಗಿರಿದುರ್ಗ್ಗಮಲ್ಲನೆಂಬ ಬಿರುದುಗಳಿವೆ. ಇವು ಇಮ್ಮಡಿ ಬಲ್ಲಾಳನಿಗೆ ಕೊಡಮಾಡಿದ ಬಿರುದುಗಳೇ. ಶಾಸನದ ಕೊನೆಯ ಎರಡು ಮೂರು ಸಾಲುಗಳಲ್ಲಿ ಇಂತಹ ಬಿರುದುಗಳು ಇನ್ನೂ ಇದ್ದುವೆಂದು ತೋರುತ್ತದೆ. ಹನ್ನೊಂದನೆಯ ಸಾಲಿನ ಬಳಿಕ ಶಾಸನ ಇದ್ದಕ್ಕಿದ್ದ ಹಾಗೆಯೇ ಮುಕ್ತಾಯವಾಗಿದೆ. ಆದ್ದರಿಂದ ಈ ಶಾಸನ ಹುಟ್ಟಿದುದು ಏಕೆ ಎಂಬುದು ತಿಳಿಯಲಾರದಾಗಿದೆ. ಈ ಶಾಸನಕ್ಕೂ ಮುಂಭಾಗದ ಚಿತ್ರಗಳಿಗೂ ಏನಾದರೂ ಸಂಬಂಧವಿದೆಯೇ ಎಂಬುದನ್ನು ಸಹ ಈ ಸ್ಥಿತಿಯಲ್ಲಿ ಹೇಳಲಾಗದು. ಆದರೆ ಹೊಯ್ಸಳರ ಎಲ್ಲ ಬಿರುದುಗಳನ್ನೂ ನಮೂದಿಸುವ ಶಾಸನ ಕೊಡಗು ಜಿಲ್ಲೆಯಲ್ಲಿ ಇದೊಂದೇ.

ನಂ. ೮೫ ಮತ್ತು ೮೬ ಇವೆರಡೂ ಮುಮ್ಮಡಿ ನರಸಿಂಹನಿಗೆ ಸೇರಿದ ವೀರಗಲ್ಲುಗಳು. ಇವುಗಳಲ್ಲಿ ಹೇಳಲಾದ ವೀರರು ಕಹಿಗೋಡು ಗ್ರಾಮಕ್ಕೆ ಸೇರಿದವರು. ಕ್ರಿ. ಶ. ೧೨೫೫ರಲ್ಲಿ ಬೀರಗವುಡನ ಮಗ ಸೋವೆಯ್ಯನು ಬುಂಬಿಯ ನಾಯಕ ಮತ್ತು ದೂತ ಬೀವೆಯ್ಯ ಸೋಮಣ್ಣನೊಡಗೂಡಿ ಕದನದಲ್ಲಿ ಪಾಲ್ಗೊಂಡಾಗ ಕಾದಿ ಬಿದ್ದನೆಂದು ಮೊದಲನೆಯ ಶಾಸನ ಹೇಳುತ್ತದೆ. ಈ ವೀರಗಲ್ಲನ್ನು ಮಡಿದ ವೀರನ ಸೋದರನಾದ ಮಾಯಿಗವುಡ ಮತ್ತು ಮಗನಾದ ಸೋಮಣ್ಣ ಇವರು ಸ್ಥಾಪಿಸಿದರು. ಎರಡನೆಯ ಶಾಸನದಲ್ಲಿನ ವೀರನು ಮಾರತಮ್ಮ. ತನ್ನ ಒಡೆಯನ ಶತ್ರುಗಳೊಂದಿಗೆ ಕಾದಿದಾಗ, ೧೨೮೫ರಲ್ಲಿ, ಈತನು ಮರಣವನ್ನಪ್ಪಿದನು. ವೀರಗಲ್ಲನ್ನು ಈತನ ಸೋದರ ಹಾಗೂ ಮಕ್ಕಳು ಕೂಡಿ ನಿಲ್ಲಿಸಿದರು.

೧೨೧೬ನೆಯ ಇನ್ನೊಂದು ಶಾಸನ (ನಂ. ೭೬) ಸಹ ಹೊಯ್ಸಳರ ಕಾಲದ್ದೇ ಆಗಿದೆ. ಆದರೆ ಇದರಲ್ಲಿ ಅರಸನ ಹೆಸರು ಸ್ಪಷ್ಟವಾಗಿಲ್ಲ. ರಾಯಕಟಕಾಚಾರ್ಯ್ಯನೆಂದು ಬಿರುದಾಂಕಿತನಾದ ವಿದ್ಯಾಧರ ಬೂಚಿದೇವರಸನು ಮರಣಹೊಂದಿದ ವಿಷಯವನ್ನು ಈ ಶಾಸನ ತಿಳಿಸುತ್ತದೆ.

## ಬೋಧರೂಪ ಭಗವರ್

ಪಾಲೂರು ಹಾಗೂ ಭಾಗಮಂಡಲಗಳಲ್ಲಿ ದೊರೆತಿರುವ ಕ್ರಿ. ಶ. ೧೪ನೆಯ ಶತಮಾನದ ಎರಡು ಶಿಲಾಶಾಸನಗಳು ಕುತೂಹಲಕಾರಿಯಾಗಿವೆ. ಇವುಗಳಲ್ಲಿ ಉಪಯೋಗಿಸಲಾದ ಲಿಪಿ ಗ್ರಂಥ, ಮಲಯಾಳಂ, ತಮಿಳು, ವಟ್ಟೆಳುತ್ತುಗಳ ಸಮ್ಮಿಶ್ರಣವಾಗಿದ್ದು, ಭಾಷೆಯಲ್ಲೂ ಸಹ ಕೆಲವು ವಿಚಿತ್ರವಾದ ಲಕ್ಷಣಗಳಿವೆ. ಪ್ರಮುಖವಾಗಿ ತಮಿಳು ಭಾಷೆಯ ಈ ಶಾಸನದಲ್ಲಿ ಮಲಿಯಾಳಂ ಮತ್ತು ತುಳು ಭಾಷೆಯ ಕೆಲವು ಪದಗಳು ಸೇರಿವೆ. ಎರಡೂ ಶಾಸನಗಳ ಆರಂಭ ಭಾಗ ಸಂಸ್ಕೃತ ಭಾಷೆಯಲ್ಲಿದೆ. ಪುರುಷೋತ್ತಮ ಪರ್ಷದಿಗೆ ಸೇರಿದ ಅವಿದ್ಯಾಮೃತ್ಯುಭಟ್ಟಾರಕರೆಂಬ ಗುರುಗಳ ಶಿಷ್ಯನಾದ ಬೋಧರೂಪಭಗವರ್ ಎಂಬ ಅರಸನೊಬ್ಬನು ಮಾಡಿದ ದಾನಗಳ ಉಲ್ಲೇಖ ಇವುಗಳಲ್ಲಿದೆ. ಈ ಅರಸನು ಯಾರು ಎಂಬುದನ್ನು ಸ್ಪಷ್ಟಪಡಿಸಿಲ್ಲ.

ಸುಮಾರಾಗಿ ಒಂದೇ ತೆರನಾಗಿರುವ ಈ ಶಾಸನಗಳಲ್ಲಿ ಮೊದಲನೆಯದು (ನಂ. ೨೦) ಪಾಲಯೂರ್ ಮಹಾದೇವನಿಗೆ ಬಿಟ್ಟ ದತ್ತಿಯನ್ನು ಕುರಿತಾದದ್ದು. ಈ ದಾನವನ್ನು ಸಂರಕ್ಷಿಸುವ ಹೊಣೆ ಶ್ರೀವೈಷ್ಣವರು, ವಲಂಜಿಯರ್ (ವರ್ತಕರು) ಹದಿನೆಂಟು ದೇಶ ಅಥವಾ ಹದಿನೆಂಟು ನಾಡಿಗೆ ಸೇರಿದವರೆಂದು ಹೇಳಲಾದ ಸಾವಿರ ಆಯುಧಪಾಣಿಗಳು (ಪಡಪಿಡಿಚ್ಚ ಪಲ್ಲಾಯಿರವರ್) ಮತ್ತು ಬ್ರಾಹ್ಮಣರು ಇವರದಾಗಿದೆ ಎಂದು ಶಾಸನದಲ್ಲಿ ಹೇಳಿದೆ. ಹದಿನೆಂಟು ದೇಶ (ಅಥವಾ ನಾಡು)ಗಳಾವುವು ಎಂಬುದನ್ನು ವಿವರಿಸಿಲ್ಲ. ೨೧ನೆಯ ಶಾಸನದಲ್ಲಿ ತೇದಿಗೆ ಸಂಬಂಧಿಸಿದಂತೆ ಕೆಲವು ಜ್ಯೋತಿಷ ವಿವರಗಳನ್ನು ಕೊಡಲಾಗಿದೆಯಾದರೂ ನಿರ್ದಿಷ್ಟವಾದ ಕಾಲನಿರ್ಣಯಕ್ಕೆ ಅವು ಸಾಲವು. ಪಾಲೂರು ಶಾಸನ ಹುಟ್ಟಿದ ಬಳಿಕ ಈ ಶಾಸನ ಹುಟ್ಟಿದೆಯೆಂದು ತೋರುತ್ತದೆ. ಈ ಶಾಸನದ ಮೂಲವನ್ನು ಮೊದಲು ತಾಮ್ರ ಪಟಗಳ ಮೇಲೆ ಕೆತ್ತಲಾಗಿತ್ತೆಂದು ಹೇಳಿದೆಯಾದರೂ ಆ ತಾಮ್ರಪಟಗಳು ಲಭ್ಯವಾಗಿಲ್ಲ. ಬೋಧರೂಪನೊಂದಿಗೆ ಇನ್ನೂ ಕೆಲವರು ಕೂಡಿ ದತ್ತಿಯನ್ನು ನೀಡಿದಂತೆ ಕಂಡುಬರುತ್ತದೆ. ಆದರೆ ಆ ಇತರರ ಹೆಸರು ಇತ್ಯಾದಿ ವಿವರಗಳನ್ನು ಕೊಟ್ಟಿಲ್ಲ. ದತ್ತಿಯನ್ನು ಕಾವೇರಿ ನದಿಯು ಹುಟ್ಟುವ ಪವಿತ್ರ ಸ್ಥಳದಲ್ಲಿನ ಭಗಂಡಾಶ್ರಮ—ಈಗಿನ ಭಾಗಮಂಡಲ—ದಲ್ಲಿ ಕೊಡಲಾಯಿತು.

ಮೇಲ್ಪುಂಡಿ ಕುನ್ನಿಯರಸನು ನಾಡನ್ನಾಳುತ್ತಿದ್ದನೆಂದು ಇದರಲ್ಲಿ ಹೇಳಿದೆ. ಆ ನಾಡು ಯಾವುದೋ ತಿಳಿಯದು. ದೇವರಿಗೆ ಅರ್ಪಿಸಬೇಕಾದ ವಸ್ತುಗಳ ವಿವರಣೆಯನ್ನು ಇದರಲ್ಲಿ ಕೊಟ್ಟಿರುವುದಲ್ಲದೆ, ಅದನ್ನು ಉಪೇಕ್ಷಿಸಿದವರಿಗೆ ವಿಧಿಸಬೇಕಾದ ದಂಡಗಳನ್ನೂ ಸೂಚಿಸಿದೆ. ದೇವಾಲಯವನ್ನು ವಳಂಜಿಯರ್ ಮತ್ತು ಆಯುಧಪಾಣಿಗಳಾದ ಸಾವಿರ ಇವರು ರಕ್ಷಿಸಬೇಕು; ಈ ದಾಖಲೆಯಲ್ಲಿ ಕೈತಪ್ಪಿಹೋಗಿರುವ ಮಿಕ್ಕ ವಿವರಗಳಿಗೆಲ್ಲ ಖಜಾನೆಯಲ್ಲಿರುವ ದಾಖಲೆಯ ಗ್ರಂಥ ಮತ್ತು ತಾಮ್ರಪಟಗಳನ್ನು ನೋಡಬೇಕೆಂದೂ ಹೇಳಿದೆ. ಶಾಸನವನ್ನು ಪಕಣ್ಣಲ ಆಯಾರಿ (ಆಚಾರಿ) ಬರೆದನು.

ಈಗಿನ ಭಗಂಡೇಶ್ವರಾಲಯದ ಒಳಗಡೆ ನಾಲ್ಕು ಸಣ್ಣ ಗುಡಿಗಳಿವೆ. ಇವುಗಳಲ್ಲಿ ಭಗಂಡೇಶ್ವರ, ವಿಷ್ಣು, ಸುಬ್ರಹ್ಮಣ್ಯ ಮತ್ತು ಗಣಪತಿಯ ವಿಗ್ರಹಗಳಿವೆ. ದ್ರಾವಿಡಶೈಲಿಯ ಈ ದೇವಾಲಯ ಕಗ್ಗಲ್ಲಿನಿಂದ ಕಟ್ಟಲ್ಪಟ್ಟಿದ್ದು, ಹೊರಗೋಡೆಗಳಲ್ಲಿ ಅರೆಗಂಬಗಳೂ, ಮಾಡಗಳೂ ಇವೆ. ಪಾಡಿ ಗ್ರಾಮದಲ್ಲಿರುವ ಸುಬ್ರಹ್ಮಣ್ಯ ದೇವಾಲಯವನ್ನು ಇದು ಬಹುಮಟ್ಟಿಗೆ ಹೋಲುತ್ತದೆ.

## ಮುನಿವರಾದಿತ್ಯ ಗೋಕುಲ ದೇವರಸ

೪೫ನೆಯ ಶಾಸನದಲ್ಲಿ ಇನ್ನೊಬ್ಬ ಸ್ಥಳೀಯ ಪ್ರಮುಖನ ಉಲ್ಲೇಖವಿದೆ. ಈ ಶಾಸನದಲ್ಲಿ ತೇದಿಗೆ ಸಂಬಂಧಿಸಿದಂತೆ ರಕ್ತಾಕ್ಷಿ ಸಂವತ್ಸರವನ್ನು ಮಾತ್ರ ತಿಳಿಸಲಾಗಿದೆ. ಇತರ ವಿವರಗಳನ್ನು ಕೊಟ್ಟಿಲ್ಲ. ಲಿಪಿ ಸ್ವರೂಪದ ಆಧಾರದ ಮೇಲೆ ಇದು ೧೩ನೆಯ ಶತಮಾನಕ್ಕೆ ಸೇರಿದ ಶಾಸನವೆಂದು ನಿರ್ಧರಿಸಬಹುದಾದ ಕಾರಣ ಶಾಸನದಲ್ಲಿ ಹೇಳಿರುವ ರಕ್ತಾಕ್ಷಿ ಸಂವತ್ಸರವು ಕ್ರಿ.ಶ. ೧೨೬೪ಕ್ಕೆ ಸರಿಹೊಂದಬಹುದು. ವೀರಮುನಿವರಾದಿತ್ಯ ಗೋಕೂಳದೇವರಸನೆಂಬ ಹೆಸರುಳ್ಳ ಇವನು ಒಬ್ಬ ಮಹಾ

ಮಂಡಲೇಶ್ವರನಾಗಿದ್ದನು. ಇವನನ್ನು ಚಲುಟು ವಿಭಾಡ, ಛಲದಂಕರಾಮ, ಸತ್ಯರಾಯಸಂವರಣಾ, ತಿರವಜ್ರರುದಿರ, ಮರೆವೊಕ್ಕರ ಕಾವ ಎಂಬುದಾಗಿ ಶಾಸನದಲ್ಲಿ ವರ್ಣಿಸಲಾಗಿದೆ. ಈ ಶಾಸನವು ಯಟಿಘಳೆ ಎಂಬಲ್ಲಿ ನಡೆದ ಗೋಗ್ರಹಣದಲ್ಲಿ ಮಡಿದ ವೀರನಿಗೆ ಸಂಬಂಧಿಸಿದುದು. ಈ ವೀರಗಲ್ಲಿರುವ ಉಲುಗುಲಿ ಗ್ರಾಮವೇ ಅಂದಿನ ಯಟಿಘಳೆ ಆಗಿರಬಹುದು.

ಇದೇ ಕಾಲಕ್ಕೆ ಸೇರಿದ ನಂ. ೩೬ನೆಯ ಶಾಸನದಲ್ಲಿ ಹೆರೂರಿನ ಮುನಿವರಾದಿತ್ಯನೆಂಬುವನ ಉಲ್ಲೇಖವಿದೆ. ಆದರೆ, ಈ ಶಾಸನವು ಬಹುಮಟ್ಟಿಗೆ ಭಿನ್ನವಾಗಿರುವುದರಿಂದ, ಶಾಸನವನ್ನು ಪೂರ್ತಿಯಾಗಿ ಮತ್ತು ಸರಿಯಾದ ರೀತಿಯಲ್ಲಿ ಅರ್ಥಮಾಡಲು ಸಾಧ್ಯವಿಲ್ಲವಾಗಿದೆ.

ಈ ಮುನಿವರಾದಿತ್ಯನಿಗೂ, ಕ್ರಿ.ಶ. ೧೨೩೬ರ (ನಂ. ೮೦) ಶಾಸನದಲ್ಲಿ ಹೇಳಲಾದ ಮುನಿವರಾದಿತ್ಯ ನಾಡಿಗೂ ಸಂಬಂಧ ವಿದ್ದಿರಬಹುದು. ಈ ಮುನಿವರಾದಿತ್ಯನಾಡು ಕೊಡಗು ಜಿಲ್ಲೆಯಲ್ಲಿತ್ತೆಂಬುದು ಸುಸ್ಪಷ್ಟ. ವಿವಿಧ ನಾಡುಗಳಲ್ಲೊಂದಾದ ಮುನಿವರಾದಿತ್ಯನಾಡಿಗೆ ಸೇರಿದ ಮಲ್ಲಿಕಾರ್ಜುನ ಎಂಬುವನು ಇತರರೊಡಗೂಡಿ ಮುಳ್ಳೂರು ಕೋಟೆಯನ್ನು ಮುತ್ತಿದಂತೆ ಈ ಶಾಸನ ಹೇಳುತ್ತದೆ.

## ವಿಜಯನಗರ

ವಿಜಯನಗರದ ಅರಸರಿಗೆ ನೇರವಾಗಿ ಸಂಬಂಧಿಸುವ ಶಾಸನಗಳು ನಮಗೆ ಕಂಡುಬಂದಿಲ್ಲವಾದರೂ, ಕೊಡಗು ಜಿಲ್ಲೆಯು ಅವರ ಅಧಿಕಾರ ಮತ್ತು ಪ್ರಭಾವಕ್ಕೊಳಪಟ್ಟಿತ್ತೆಂಬುದು ಸುಸ್ಪಷ್ಟ. ಮುಳ್ಳೂರಿನ ಬಸದಿಗಳ ಆವರಣದಲ್ಲಿರುವ ಕ್ರಿ. ಶ. ೧೩೯೦ನೆಯ ವರ್ಷದ ಶಾಸನ (ನಂ. ೭೫)ವು ಮುಂನ ರಾಜಾಧಿರಾಜ ಕೊಂಗಾಳ್ವನು ತನ್ನ ತಾಯಿ ಪೋಚಬ್ಬರಸಿಯ ಪುಣ್ಯಾರ್ಥವಾಗಿ ನೀಡಿದ ದತ್ತಿಯ ವಿಷಯವನ್ನು ಮೂಲ ದಾಖಲೆಗಳಿಂದ ಓದಿಸಿ ತಿಳಿದ ಇಮ್ಮಡಿ ಹರಿಹರನು ಅದನ್ನು ಪುನರ್ದತ್ತಿ ಮಾಡಿದನು ; ಗೊಂಕಾಜಡ್ಡಿನಾಯಕನೆಂಬ ಅಧಿಕಾರಿಯ ಧೈರ್ಯ, ಸಾಹಸಗಳನ್ನು ಗುಂಡಪ್ಪ ದಂಡನಾಯಕನಿಂದ ತಿಳಿದ ದೊರೆಯು ಮೆಚ್ಚುಗೆಯಾಗಿ ಅವನಿಗೆ ಮುಳ್ಳೂರು ನಾಡನ್ನು ನೀಡಿದನು ; ಕುಮಾರನಹಳ್ಳಿ ಮತ್ತು ಕಾರಗೋಡು ಗ್ರಾಮಗಳನ್ನು ಕ್ರಮವಾಗಿ ಭೀಮಾಪುರ ಮತ್ತು ಅಣ್ಣಾಂಗಪುರಗಳೆಂದು ನಾಮಕರಣ ಮಾಡಿ ಪಾರ್ಶ್ವನಾಥ ದೇವರಿಗೆ ದಾನಮಾಡಿದನು ಎಂಬ ವಿವರಗಳನ್ನೊಳಗೊಂಡಿದೆ.

## ಬೇಲೂರು ನಾಯಕರು

೨೮, ೯೪ ಮತ್ತು ೬೬ನೆಯ ಶಾಸನಗಳು ಬೇಲೂರು ನಾಯಕರ ಕಾಲಕ್ಕೆ ಸೇರುತ್ತವೆ. ೨೮ನೆಯ ತಾಮ್ರಶಾಸನದ ಕಾಲ ಕ್ರಿ.ಶ. ೧೬೯೩. ನಾಲ್ಕನೆಯ ಕೃಷ್ಣಪ್ಪನಾಯಕನು ಯೋಗಪ್ಪೈಯ ಎಂಬ ಬ್ರಾಹ್ಮಣನಿಗೆ ಹಿರುಮನಹಳ್ಳಿ ಮತ್ತು ಕಟ್ಟಿಪುರ ಗ್ರಾಮಗಳನ್ನು ದಾನವಾಗಿ ನೀಡಿದ ವಿಷಯವು ಶಾಸನದಿಂದ ತಿಳಿದುಬರುತ್ತದೆ. ಕಟ್ಟಿಪುರವು ಅರಕಲ್ಗೋಡು ವಳಿತದೊಳಗೆ ತುಂಗನಾಡಿನ ನಿರ್ಗುಂದ ಸ್ಥಳಕ್ಕೆ ಸೇರಿತ್ತು. ಶಾಸನದಲ್ಲಿ ಬೇಲೂರಿನ ಈ ನಾಯಕರು ಯರ—ಕೃಷ್ಣಪ್ಪನಾಯಕನ ವಂಶಸ್ಥರೆಂದೂ, ವಿಜಯನಗರದ ಅರಸನಾದ ಕೃಷ್ಣರಾಯನು ಅವನಿಗೆ ಬೇಲೂರು ಸೀಮೆಯ ನಾಯಕತನವನ್ನು ಒಪ್ಪಿಸಿದನೆಂದೂ ಹೇಳಲಾಗಿದೆ. ನಾಲ್ಕನೆಯ ಕೃಷ್ಣಪ್ಪನಾಯಕನು ಮುಮ್ಮಡಿ ವೆಂಕಟಾದ್ರಿನಾಯಕನ ಮಗ ಮತ್ತು ಮುಮ್ಮಡಿ ಕೃಷ್ಣಪ್ಪನಾಯಕನ ಮೊಮ್ಮಗ. ಶಾಸನದ ಕೊನೆಯಲ್ಲಿ ‘ ಶ್ರೀಕೃಷ್ಣ ’ ಎಂದು ಈ ನಾಯಕನ ಹಸ್ತಾಕ್ಷರವಿದೆ.

೯೪ನೆಯ ಶಾಸನದಿಂದ ಬೇಲೂರ ನಾಯಕನಾದ ಕೃಷ್ಣಪ್ಪನಾಯಕನು ಕೈವಲ್ಯ ಎಂಬ ಯೋಗಿಯೊಬ್ಬನಿಗೆ ಮೂದ್ರವಳ್ಳಿ ಗ್ರಾಮವನ್ನು ಕೃಷ್ಣಾರ್ಪಣವೆಂದು ದತ್ತಿ ನೀಡಿದನೆಂದು ತಿಳಿದುಬರುತ್ತದೆ. ಸಂಸ್ಕೃತ ಶ್ಲೋಕ ರೂಪದಲ್ಲಿರುವ, ೧೮ನೆಯ ಶತಮಾನಕ್ಕೆ ಸೇರಬಹುದಾದ, ಈ ಶಾಸನವು ಐದನೆಯ ಕೃಷ್ಣಪ್ಪನಾಯಕನದೆಂದು ಹೇಳಬಹುದು. ಕೊನೆಯ ಶ್ಲೋಕ ಅಪೂರ್ಣ. “ ಯಾವ .ಕಾರಣಕ್ಕಾಗಿ ಇದನ್ನು ಕೊಡಲಾಯಿತೆಂದು ಕೇಳಿದರೆ ” ಎಂಬ ಪ್ರಶ್ನೆಯೊಂದಿಗೆ ಆರಂಭವಾಗುವ ಈ ಶ್ಲೋಕ ಥಟ್ಟನೆ ಅಲ್ಲಿಗೇ ನಿಂತುಬಿಟ್ಟಿದೆ. ಕೈವಲ್ಯ ಯೋಗಿಯನ್ನು ಶ್ರೀಮತ್ಪರಮಹಂಸ ಪರಿವ್ರಾಜಕರಲ್ಲಿ ಶ್ರೇಷ್ಠ, ಮಹಾಯೋಗಿ, ಸದಾ ಜ್ಞಾನೈಕತತ್ಪರ ಮತ್ತು ಯತಿಕುಂಜರ ಎಂಬುದಾಗಿ ಶಾಸನದಲ್ಲಿ ಪ್ರಶಂಸಿಸಲಾಗಿದೆ.

ಮಾಲಂಬಿಯಲ್ಲಿರುವ ೬೬ನೆಯ ಶಾಸನದ ಕಾಲ ಕ್ರಿ.ಶ. ೧೭೫೬. ಇದೇ ಕೃಷ್ಣಪ್ಪನಾಯಕನು ಮಾಲಂಬಿಯ ರಾಚೇಗೌಡನಿಗೆ ಗ್ರಾಮ ಕಂದಾಯವನ್ನು ದತ್ತಿಬಿಟ್ಟ ವಿಷಯವನ್ನು ತಿಳಿಸುತ್ತದೆ.

ಮೇಲೆ ಹೇಳಿದ ಶಾಸನಗಳು ಕೊಡಗು ಜಿಲ್ಲೆಯ ಕೆಲವು ಭಾಗಗಳು ಕ್ರಿ.ಶ. ೧೮ನೆಯ ಶತಮಾನದಲ್ಲಿ ಬೇಲೂರು ನಾಯಕರ ಅಧೀನಕ್ಕೊಳಪಟ್ಟಿದ್ದುವೆಂಬುದನ್ನು ಸೂಚಿಸುತ್ತವೆ.

## ಕೊಡಗಿನ ರಾಜರು

ಕ್ರಿ.ಶ. ೧೬೩೩ ರಿಂದ ೧೮೩೪ರ ವರೆಗೆ ಸುಮಾರು ಇನ್ನೂರು ವರ್ಷಗಳ ಕಾಲ ಕೊಡಗಿನ ರಾಜರು ಮೊದಲು ಹಾಲೇರಿಯಿಂದಲೂ, ಅನಂತರ ಮಡಿಕೇರಿಯಿಂದಲೂ ರಾಜ್ಯವಾಳಿದರು. ಅನೇಕ ಪತ್ರಗಳು ಮತ್ತು ಸಮಕಾಲೀನ ವಿದೇಶೀ ಬರಹಗಾರರ ವೃತ್ತಾಂತಗಳ ರೂಪದಲ್ಲಿನ, ಈ ಅರಸರ ಇತಿಹಾಸ ರಚನೆಗೆ ಸಹಾಯವಾಗುವ, ಐತಿಹಾಸಿಕ ದಾಖಲೆಗಳು ಹೇರಳವಾಗಿ ನಮಗೆ ದೊರೆಯುತ್ತವೆ. ಈ ಕಾಲದ ಇತಿಹಾಸವನ್ನು ನಿರೂಪಿಸುವುದಕ್ಕಾಗಿಯೇ ಒಂದನೆಯ ವೀರರಾಜೇಂದ್ರನ ಮೇಲ್ವಿಚಾರಣೆಯಲ್ಲಿ 'ರಾಜೇಂದ್ರನಾಮ' ಎಂಬ ಕೃತಿಯನ್ನು ಕ್ರಿ.ಶ. ೧೮೦೮ರಲ್ಲಿ ಸಿದ್ಧಪಡಿಸಲಾಯಿತು. ಆದರೆ, ಈ ಕುರಿತಾದ ಶಾಸನಾಧಾರಗಳು ಅತಿವಿರಳ. ಎರಡು ಶತಮಾನಗಳ ಕಾಲದ ಅವರ ಆಳಿಕೆಗೆ ಸಂಬಂಧಿಸಿದಂತೆ ಒಟ್ಟು ಇಪ್ಪತ್ತೈದಕ್ಕಿಂತಲೂ ಹೆಚ್ಚು ಶಾಸನಗಳು ದೊರೆಯುವುದಿಲ್ಲ. ಆದರೂ ಈ ಶಾಸನಗಳು ಕೊಡಗಿನ ಅರಸರ ಇತಿಹಾಸವನ್ನು ಬರೆಯುವಲ್ಲಿ ಕೆಲವು ಮುಖ್ಯ ಮಾಹಿತಿಗಳನ್ನೊದಗಿಸುತ್ತವೆ.

ಕೊಡಗಿನ ರಾಜರು ತಾವು ಚಂದ್ರವಂಶ, ಭಾರದ್ವಾಜಗೋತ್ರ, ಆಶ್ವಲಾಯನ ಸೂತ್ರ, ಋಕ್‌ಶಾಖೆಗೆ ಸೇರಿದವರೆಂದೂ, ವೀರಶೈವಮತಾನುಯಾಯಿಗಳೆಂದೂ ಹೇಳಿಕೊಳ್ಳುತ್ತಾರೆ. ಇವರ ಮೊದಲ ಶಾಸನಗಳಲ್ಲಿ (ಉದಾ. ನಂ. ೨೯, ೩೧, ೩೨, ೬೩, ಇತ್ಯಾದಿ) ಋಕ್‌ಶಾಖೆಗೆ ಬದಲು ಋಕ್ಷಭಾನುಕಾಧ್ಯಾಯ ಎಂದಿದೆ. ಕೊಡಗಿನ ರಾಜರಿಗೆ ರಾಜಾಧಿರಾಜ, ರಾಜಪರಮೇಶ್ವರ, ಪ್ರೌಢಪ್ರತಾಪ, ಅಪ್ರತಿಮ ವೀರನರಪತಿ ಮತ್ತು ಕೊಡಗಿನ ಸಂಸ್ಥಾನದ ಶ್ರೀರತ್ನಸಿಂಹಾಸನಾರೂಢ ಎಂಬ ಬಿರುದುಗಳಿದ್ದವು. ಇಮ್ಮಡಿ ಲಿಂಗರಾಜೇಂದ್ರವಡೆಯ ಮತ್ತು ಇಮ್ಮಡಿ ವೀರರಾಜೇಂದ್ರವಡೆಯರ ಕಾಲದ ಕೆಲವು ಶಾಸನಗಳಲ್ಲಿ (೩, ೯, ೧೧ ಇತ್ಯಾದಿ) ಕ್ಷೀರನಗರಮಧ್ಯಪರಿಭ್ರಾಜಮಾನಮಣಿಗಣಖಚಿತಚಾರುಸಿಂಹಾಸನಾರೂಢ, ಅಪ್ರತಿಮಪ್ರತಾಪಪ್ರಕಾಶಪ್ರಹಸಿತ ಮಾರ್ತಾಂಡಮಂಡಲ, ಅಖಂಡಲಾಖಂಡವೈಭವಸಮೇತ, ಸಕಲದಿಗಂತರಾಲವಿದ್ಯೋತ್ತಮಸಮಾನಕೀರ್ತಿಪ್ರಖ್ಯಾತ, ಸಮಸ್ತ ಪ್ರಶಸ್ತರಾಜಧರ್ಮಾವಧಾರಣಯುಧಿಷ್ಠಿರ ಹಾಗೂ ಮಹಾರಾಜ ಎಂಬ ಬಿರುದುಗಳೂ ಕಂಡುಬರುತ್ತವೆ.

ಈ ಅರಸರು ಮೊದಲು ಹಾಲೇರಿಯಿಂದಲೇ ರಾಜ್ಯವಾಳುತ್ತಿದ್ದುದರಿಂದ, ಇವರನ್ನು ಹಾಲೇರಿ ರಾಜರೆಂದೇ ಕರೆಯಲಾಯಿತು ; ನಂತರ ಇವರ ಮುಖ್ಯಸ್ಥಳವನ್ನು ಮಡಿಕೇರಿಗೆ ಬದಲಾಯಿಸಿದರೂ, ಅಲ್ಲಿಂದ ಆಳಿದ ರಾಜರು ಕೂಡ ತಮ್ಮನ್ನು ಪ್ರಾಚೀನ ಕ್ಷೀರನಗರದ ಅಂದರೆ ಹಾಲೇರಿಯ "ಮಣಿಗಣಖಚಿತಚಾರುಸಿಂಹಾಸನಾರೂಢ"ರೆಂದು ಕರೆದುಕೊಂಡಿದ್ದಾರೆ.

ಇವರ ಮೊದಲಿನ ಶಾಸನಗಳಲ್ಲಿನ ತೇದಿಗಳು ಸಾಮಾನ್ಯವಾಗಿ ಶಾಲಿವಾಹನ ಶಕದಲ್ಲಿವೆ ; ಆದರೆ, ಅನಂತರದ ಶಾಸನಗಳಲ್ಲಿ ಶಕವರ್ಷ ಮತ್ತು ಕಲಿಯುಗ ವರ್ಷಗಳೆರಡನ್ನೂ ಜೊತೆಯಾಗಿ ನಮೂದಿಸಿದೆ. ಇಮ್ಮಡಿ ಲಿಂಗರಾಜನ ಕಾಲದಿಂದ ಆರಂಭಿಸಿ ಇವರ ಶಾಸನಗಳಲ್ಲಿ ಸಾಮಾನ್ಯವಾಗಿ ನೀಡುವ ಕಾಲದ ವಿವರಗಳೊಂದಿಗೆ ಕಲಿಯುಗದಲ್ಲಿ ನಿರ್ದಿಷ್ಟವಾದ ದಿನವನ್ನೂ ತಿಳಿಸುವ ಇನ್ನೂ ಒಂದು ವೈಶಿಷ್ಟ್ಯವನ್ನು ಕಾಣುತ್ತೇವೆ. ಉದಾಹರಣೆಗೆ : ೯ ಮತ್ತು ೧೧ನೆಯ ಶಾಸನಗಳು ಓಂಕಾರೇಶ್ವರ ದೇವಾಲಯದ ನಿರ್ಮಾಣಕಾರ್ಯವು ೧೭೯೬೩೯೨ನೆಯ ಕಲಿದಿನದಂದು ಆರಂಭವಾಗಿ, ೧೭೯೭೪೨೧ನೆಯ ಕಲಿದಿನದಂದು ಪೂರ್ಣಗೊಂಡಿತೆಂದು ಹೇಳುತ್ತವೆ. ೮ನೆಯ ಶಾಸನವು ಮಡಿಕೇರಿಯಲ್ಲಿ ಅರಮನೆಯ ನಿರ್ಮಾಣಕಾರ್ಯವು ೧೭೯೪೬೬೩ನೆಯ ಕಲಿದಿನದಂದು ಪ್ರಾರಂಭವಾಗಿ, ೧೭೯೫೪೩೩ನೆಯ ಕಲಿದಿನದಂದು ಪೂರೈಸಿತೆಂದು ತಿಳಿಸುತ್ತದೆ.

ಇದುವರೆಗೆ ದೊರೆತಿರುವ ಕೊಡಗಿನ ಅರಸರ ಶಾಸನಗಳಲ್ಲಿ ಅತಿಪ್ರಾಚೀನವಾದುದು ಕ್ರಿ.ಶ. ೧೭೩೦ನೆಯ ಫೆಬ್ರವರಿ ೧೩ನೆಯ ತಾರೀಕಿನದು (ನಂ. ೪೦). ಈ ಶಾಸನವು ಹಾಲೇರಿ ವೀರಪ್ಪವಡೆಯರು ಕುಡುಮದ ಮಂಜುನಾಥದೇವರಿಗೆ ವಿವಿಧ ಸೇವೆಗಳಿಗೆಂದು ನೀಡಲಾದ ದತ್ತಿಯನ್ನು ನಿರೂಪಿಸುತ್ತದೆ. ಕ್ರಿ.ಶ. ೧೬೮೭ರಿಂದ ೧೭೩೬ ರವರೆಗೆ ಆಳಿದ ಮೊದಲನೆಯ ಮುದ್ದುರಾಜನ ಮಗನಾದ ದೊಡ್ಡವೀರಪ್ಪನೇ ಶಾಸನೋಕ್ತ ವೀರಪ್ಪವಡೆಯ. ಇವನ ತಂದೆಯಾದ ಮುದ್ದುರಾಜನು ೧೬೮೧ರಲ್ಲಿಯೇ ತನ್ನ ರಾಜಧಾನಿಯನ್ನು ಮಡಿಕೇರಿಗೆ ಬದಲಾಯಿಸಿದನೆಂದು ರಾಜೇಂದ್ರನಾಮೆಯಲ್ಲಿ ಹೇಳಿದ್ದು, ಈತನೂ ಅಲ್ಲಿಂದಲೇ ಆಳುತ್ತಿದ್ದರೂ ಈ ಶಾಸನದಲ್ಲಿ ಇವನನ್ನು ಹಾಲೇರಿ ವೀರಪ್ಪವೊಡೆಯನೆಂದೇ ಸಂಬೋಧಿಸಲಾಗಿದೆ. ಈ ಅರಸನು ಹೆಗ್ಗಡಹಳ್ಳಿ, ಸಿರಂಗಾಲ ಮತ್ತು ಉಭಯಗಡಿಗೆ ಸಲ್ಲುವ ಇಪ್ಪತ್ತೊಂಬತ್ತು ಉಪಗ್ರಾಮಗಳನ್ನು ಸರ್ವಮಾನ್ಯವಾಗಿ ದತ್ತಿ ನೀಡಿದನೆಂದು ಶಾಸನವು ತಿಳಿಸುತ್ತದೆ. ಹೆಗ್ಗಡಹಳ್ಳಿಯಿಂದ ಸುಮಾರು ಒಂದು ಕಿಲೋಮೀಟರ್ ದೂರದಲ್ಲಿರುವ ಕಣಿವೆ ಎಂಬ ಗ್ರಾಮವೇ ಹಿಂದಿನ ಕುಡುಮವಾಗಿರಬೇಕೆಂದು ತೋರುತ್ತದೆ. ಇಲ್ಲಿ ಪಾವಿತ್ರ್ಯಕ್ಕೆ ಹೆಸರಾದ ಪ್ರಾಚೀನ ಶಿವಾಲಯವೊಂದಿದೆ. ೪೧ನೆಯ ಶಾಸನದಲ್ಲಿ ಕಾಲದ ನಿರ್ದೇಶವಿಲ್ಲದಿದ್ದರೂ ಅದು ಹಿಂದಿನ ಶಾಸನದ ಕಾಲಕ್ಕೇ ಸೇರುತ್ತದೆ. ಈ ಶಾಸನದ ಕೆಳಗೆ ಕೆತ್ತಿರುವ ತ್ರಿಶೂಲ ಮತ್ತು ಡಮರುಗಳನ್ನು ಕುಡುಮದ ಮಂಜುನಾಥಸ್ವಾಮಿಯವರ ಸಂಕೇತಗಳೆಂದು ಕರೆಯಲಾಗಿದೆ. ೪೦ನೆಯ ಶಾಸನದ ಕೆಳಭಾಗದಲ್ಲಿಯೂ ಈ ಸಂಕೇತಗಳನ್ನು ಕೆತ್ತಲಾಗಿದೆ.

೪೦ನೆಯ ಶಾಸನವೇ ದೊಡ್ಡವೀರಪ್ಪನ ಕಾಲದ ಅತಿ ಪ್ರಾಚೀನ ಶಾಸನವಾದರೂ, ೬೩ನೆಯ ಶಾಸನದಲ್ಲಿ ಕ್ರಿ. ಶ.

೧೭೨೮ರಲ್ಲಿಯೇ ಅವನು ದತ್ತಿಯೊಂದನ್ನು ನೀಡಿದ್ದ ಉಲ್ಲೇಖ ಕಂಡುಬರುತ್ತದೆ. ಒಂದನೆಯ ವೀರರಾಜೇಂದ್ರ ವಡೆಯನ ಈ ತಾಮ್ರ ಶಾಸನದಲ್ಲಿ ಹಿಂದೆ ತನ್ನ ಹಿರಿಯ ಅಜ್ಜಯ್ಯನವರಾದ ದೊಡ್ಡವೀರಪ್ಪವಡೆಯರು ಯಡೂರಿನ ಸಮೀಪದ ಅಬ್ಬಿಮಠಕ್ಕೆ ೧೭೨೮ರಲ್ಲಿ ಕೊಟ್ಟಿದ್ದ ಎರಡು ಗ್ರಾಮಗಳ ದತ್ತಿಯನ್ನು ವೀರರಾಜೇಂದ್ರವಡೆಯರು (I) ಈ ಶಾಸನದ ಮೂಲಕ ಜೀರ್ಣೋದ್ಧಾರ ಮಾಡಿದರೆಂದು ಹೇಳಿದೆ. ಅಬ್ಬಿಮಠವು ದೊಡ್ಡವೀರಪ್ಪನಿಂದ ಸ್ಥಾಪಿತವಾದ ಹಾಗೂ ದಾನದತ್ತಿಗಳನ್ನು ಪಡೆದ ಒಂದು ಪ್ರಮುಖ ವೀರಶೈವ ಮಠ. ಈ ಮಠವು ಅತ್ಯಂತ ಸುಂದರವಾದ ಕಣಿವೆ ಪ್ರದೇಶದಲ್ಲಿದೆ : ಇದರ ಪಕ್ಕದಲ್ಲಿ ನಿಡಿದಾದ ಬಂಡೆಯಿಂದ ಚಿಕ್ಕ ಝರಿಯೊಂದು ಧುಮುಕುತ್ತದೆ.

ಮಾದಾಪುರದಲ್ಲಿ ಒಂದನೆಯ ಲಿಂಗರಾಜೇಂದ್ರನ ಮರಣವಿಷಯವನ್ನು ತಿಳಿಸುವ ಎರಡು ಶಾಸನಗಳು ನಮಗೆ ದೊರೆಯುತ್ತವೆ. ೩೧ನೆಯ ಶಾಸನವು ಈತನ ಸಮಾಧಿಯ ಗುಡಿಯ ಶಿಖರದ ಮೇಲಿನ ಕಲಶಕ್ಕೆ ಸೇರಿಸಿದ ಲೋಹದ ಧ್ವಜದ ಮೇಲಿದೆ. ಇದರ ಮಧ್ಯಭಾಗದಲ್ಲಿ ವೃತ್ತಾಕಾರದ ರಾಜಮುದ್ರೆಯಲ್ಲಿ 'ವಿ' ಎಂಬ ಅಕ್ಷರ ಮತ್ತು ಅದರ ಕೆಳಗೆ, ಲಿಂಗರಾಜೇಂದ್ರನು ಮರಣ ಹೊಂದಿದ ವರ್ಷವಾದ ಕಲಿವರ್ಷ ೪೮೮೧ ಇವುಗಳನ್ನು ಕೆತ್ತಲಾಗಿದೆ. ಇದೇ ಸಮಾಧಿಯ ಮುಂಭಾಗದ ಗೋಡೆಯ ಮೇಲೆ ೨೪ನೆಯ ಶಾಸನವಿದೆ. ಕ್ರಿ. ಶ. ೧೭೮೦, ಫೆಬ್ರುವರಿ ೨೪ರಂದು ಲಿಂಗರಾಜೇಂದ್ರನು ಮರಣಹೊಂದಿದನು. ಮತ್ತು ಅವನ ಅಪೇಕ್ಷೆಯಂತೆ ಅವನ ಮಗನಾದ ವೀರರಾಜೇಂದ್ರವಡೆಯನು ಮಹಾದೇವಪುರದಲ್ಲಿ (ಈಗಿನ ಸೋಮವಾರಪೇಟೆ ತಾಲೂಕಿನ ಮಾದಾಪುರ) ಸಮಾಧಿಯ ಮೇಲೆ ದೇವಾಲಯವನ್ನು ಕಟ್ಟಿಸಿ ಬಸವೇಶ್ವರನ ಪ್ರತಿಷ್ಠೆಯನ್ನು ಮಾಡಿಸಿದನೆಂದು ಈ ಶಾಸನದಿಂದ ತಿಳಿದುಬರುತ್ತದೆ. ಅಲ್ಲದೆ ಮುರಿಗಿ ಸಂಪ್ರದಾಯದ ಮಠವೊಂದನ್ನು ಕಟ್ಟಿಸಿ, ಅದಕ್ಕೆ ಕೆಲವು ಗ್ರಾಮಗಳನ್ನು ಈತನು ದತ್ತಿ ಬಿಟ್ಟನು. ಕೊಡಲಿಯ ಚರಮೂರ್ತಿಗಳಾದ ಶಿವಲಿಂಗಪ್ಪನವರ ಕೋರಿಕೆಯಂತೆ, ಕ್ರಿ.ಶ. ೧೭೮೦, ನವಂಬರ್ ೧೦ರಂದು ಈ ದೇವಾಲಯದ ನಿರ್ಮಾಣಕಾರ್ಯವು ಆರಂಭವಾಗಿ ೧೭೮೨, ಏಪ್ರಿಲ್ ೨೩ರಂದು ಪೂರ್ಣಗೊಂಡಿತೆಂಬ ಹೆಚ್ಚಿನ ವಿವರಗಳನ್ನೂ ಈ ಶಾಸನ ಒದಗಿಸುತ್ತದೆ.

ಈ ಹಿಂದೆಯೇ ನಾವು ಗಮನಿಸಿದಂತೆ ೬೩ನೆಯ ಶಾಸನವು ಒಂದನೆಯ ವೀರರಾಜೇಂದ್ರವಡೆಯನಿಗೆ ಸೇರಿದುದು. ಈ ಶಾಸನದಲ್ಲಿ ದೊರೆಯು ತನ್ನನ್ನು 'ಶಿವಗಂಗೆ ಮೇಲಣ ಗವಿಸಿಂಹಾಸನಾರೂಢರ ಸಂಪ್ರದಾಯಸ್ತನಾದ ಶಿಥಪುರದ ಮಠದ ಸ್ವಾಮಿಯವರ ಕರಕಮಲಸಂಜಾತ'ನೆಂದು ಕರೆದುಕೊಂಡಿದ್ದಾನೆ. ಕ್ರಿ.ಶ. ೧೭೨೮ರಲ್ಲಿಯೇ ದೊಡ್ಡವೀರಪ್ಪನು ನೀಡಿದ್ದ ಹೊಸಹಳ್ಳಿ ಮತ್ತು ಜಿಗಟ್ಟಳ್ಳಿ ಎಂಬ ಎರಡು ಗ್ರಾಮಗಳ ದತ್ತಿಯನ್ನು ಮುಂದುವರಿಸಿ, ಸ್ಥಿರಪಡಿಸಿದುದಷ್ಟೇ ಅಲ್ಲದೆ, ದೊಡ್ಡ ವಿರೂಪಾಕ್ಷಸ್ವಾಮಿಯವರು ಮಡಿಕೇರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಬಾಚಳ್ಳಿ ಎಂಬ ಇನ್ನೂ ಒಂದು ಗ್ರಾಮವನ್ನು ದಾನವಾಗಿ ನೀಡಿದನು. ಕ್ರಿ.ಶ. ೧೭೯೬ರಲ್ಲಿ ಈ ದಾನವಿವರಗಳೆಲ್ಲವನ್ನೂ ಒಳಗೊಂಡ ತಾಮ್ರ ಶಾಸನವನ್ನು ಮುರುಗಿಸ್ವಾಮಿಯವರ ಪ್ರತಿನಿಧಿಯಾದ ಅಬ್ಬಿಮಠದ ನಿರಂಜನ ದೇವರ ಪಾದಗಳಲ್ಲಿ ಸಮರ್ಪಿಸಿದನು. ಈ ದಾನ ಶಾಸನವನ್ನು ನೀಡುವಾಗ ಶಿವಪೂಜಾ ಕಾಲದಲ್ಲಿ ಈ ಕೆಳಗಿನ ಆಶೀರ್ವಾದ ಶ್ಲೋಕವನ್ನು ಹೇಳಬೇಕೆಂದು ದೊರೆಯು ಕೇಳಿಕೊಂಡಿದ್ದಾನೆ.

ಜಾತಿಸ್ಮರತ್ವಂ ಪೃಥ್ವೀಪತಿತ್ವಂ ಸೌಭಾಗ್ಯಲಾವಣ್ಯಮತೀವರೂಪಂ।
ತ್ವದ್ಭಕ್ತಿ ವಿದ್ಯೇ ಪರಮಾಯುರಿಷ್ಟಂ ತ್ವಂ ದಶ್ಚಮೇ ಶಂಕರ ಜನ್ಮಜನ್ಮನಿ॥

೩೨ನೆಯ ಶಾಸನವೂ ಅದೇ ದಿನ, ಆದೇ ಅರಸನು ಮಹಾದೇವಪುರದ ಮಠಕ್ಕೆ ನೀಡಿದ ಭೂದಾನ ವಿಷಯವನ್ನು ತಿಳಿಸುತ್ತದೆ. ಮಹಾದೇವಪುರಕ್ಕೆ ಸ್ವಾಮಿಯವರು ಭೇಟಿಕೊಟ್ಟಾಗ ದೊರೆಯು ಅವರಿಗೆ ನಮಸ್ಕರಿಸಿ, ಅವರ ಪಾದವಿಡಿದು ಶಿವಾರ್ಪಣವೆಂದು ನೀಡಿದ ದಾನವಿದು. ಈ ದಾನಶಾಸನವನ್ನೊಳಗೊಂಡ ತಾಮ್ರಫಲಕವನ್ನು ಮಹಾಮುರಿಗಾಸ್ವಾಮಿಗಳ ಚರಮೂರ್ತಿಗಳಾದ ಕೊಡಲಿ ಮಹಂತ ಸ್ವಾಮಿಗಳ ಚರಮೂರ್ತಿಗಳಾದ ಶಾಂತವೀರಸ್ವಾಮಿಯವರ ಪಾದಗಳಲ್ಲಿ ಅರ್ಪಿಸಲಾಯಿತು. ಹೀಗೆ ದಾನ ನೀಡಿದ ಗ್ರಾಮಗಳಿಂದುತ್ಪನ್ನವಾಗುವ ಕಂದಾಯದಲ್ಲಿ ಪುರವರ್ಗ, ದೇವಮಾನ್ಯ, ಭೂತವುತ್ತಾರ, ಗವುಡುಂಬಳಿ ಮತ್ತು ನಾಯಿಮನ್ನು ಮುಂತಾದುವುಗಳ ಬಗ್ಗೆ ಹಿಂದಿನ ದತ್ತಿಗಳ ಉತ್ತಾರವನ್ನು ಕಳೆದು, ಉಳಿದ ಕಂದಾಯದ ವಿವರಗಳನ್ನು ಅದು ತಿಳಿಸುತ್ತದೆ. ೨೪ ಮತ್ತು ೩೧ನೆಯ ಶಾಸನಗಳಲ್ಲಿ ಉಲ್ಲೇಖವಾಗಿರುವ ಗ್ರಾಮಗಳೇ ಇಲ್ಲಿಯೂ ಉಲ್ಲೇಖಗೊಂಡಿವೆ.

ಇದೇ ರಾಜನ ಕಾಲದಲ್ಲಿ ಲಕ್ಷ್ಮೀನಾರಾಯಣ ಮತ್ತು ಕುಮಾರಸ್ವಾಮಿಯ ವಿಗ್ರಹಗಳು ಹಾಗೂ ಭಗಂಡೇಶ್ವರನ ಉತ್ಸವಮೂರ್ತಿಗಳನ್ನು ಭಾಗಮಂಡಲದ ದೇವಾಲಯದಲ್ಲಿ ಪ್ರತಿಷ್ಠಾಪಿಸಲಾಯಿತೆಂದು ೩೪ನೆಯ ಶಾಸನದಿಂದ ತಿಳಿದುಬರುತ್ತದೆ. ಟೀಪುಸುಲ್ತಾನನು ಈ ಪ್ರದೇಶವನ್ನಾಕ್ರಮಿಸಿ, ಇದನ್ನು ಕೋಟೆಯನ್ನಾಗಿ ಪರಿವರ್ತಿಸಿದ ಕಾಲದಲ್ಲಿ, ಈ ವಿಗ್ರಹಗಳನ್ನು ಮುಂಜಾಗರೂಕತೆಯ ಕ್ರಮವಾಗಿ ಸುರಕ್ಷಿತ ಸ್ಥಳವೊಂದಕ್ಕೆ ಸಾಗಿಸಲಾಗಿದ್ದು, ಈಗ ಪುನಃ ಅವುಗಳನ್ನು ಪ್ರತಿಷ್ಠಾಪಿಸಿರಬೇಕೆಂದು ತೋರುತ್ತದೆ. ಕಲಿವರ್ಷ ೪೮೯೮, ನಳ ಸಂವತ್ಸರದ ಮಾಘ ಶುದ್ಧ ೧, ಭಾನುವಾರ ಅಂದರೆ ಕ್ರಿ.ಶ. ೧೭೯೭ ಜನವರಿ ೨೪ರಂದು ಈ ಪ್ರತಿಷ್ಠೆಯನ್ನು ಮಾಡಲಾಯಿತು. ಇದು ವೀರರಾಜೇಂದ್ರನು ದೇವಮ್ಮಾಜಿಯನ್ನು ಮದುವೆಯಾದ ದಿನವೆಂದು 'ರಾಜೇಂದ್ರನಾಮೆ'ದಿಂದ ತಿಳಿದುಬರುತ್ತದೆ.

೧೩ನೆಯ ಶಿಲಾಶಾಸನವು ಮೊದಲನೆಯ ವೀರರಾಜೇಂದ್ರವಡೆಯನು ತನ್ನ ಆಪ್ತಸೇವಕನಾದ ಬಿದ್ದಂಡ್ರ ಬೊಪು ಎಂಬುವನ ನೆನಪಿಗಾಗಿ ಸ್ಥಾಪಿಸಿದುದು. ಬೊಪುವು ಕಡಿಯತ್ತುನಾಡ ಬಾವಲಿ ಗ್ರಾಮದವನು. ೧೭೭೯ರಲ್ಲಿ ರಾಜನ ಸೇವೆಗೆ ಸೇರಿದ ಅವನು ಹತ್ತೊಂಬತ್ತು ವರ್ಷಗಳ ಕಾಲ ವಿವಿಧ ಹುದ್ದೆಗಳಲ್ಲಿ ಕೆಲಸಮಾಡಿ ಸಿರ್‌ಕಾರೇಕಾರ್ ಅಥವಾ ಸೇನಾಧಿಪತಿ ಯಾದನು. ರಾಜನ ಬೇಟೆ ಕಾರ್ಯಗಳಲ್ಲಿ ಹಾಗೂ ಟೀಪುಸುಲ್ತಾನನೊಂದಿಗೆ ನಡೆಸಿದ ಯುದ್ಧಗಳಲ್ಲಿ ಅವನು ಸಲ್ಲಿಸಿದ ನಿಷ್ಠಾಪೂರ್ಣ ಸೇವೆಯನ್ನು ಶಾಸನದಲ್ಲಿ ಪ್ರಶಂಸಿಸಲಾಗಿದೆ. ಬೊಪ್ಪವು ಕ್ರಿ.ಶ. ೧೮೦೭, ಡಿಸೆಂಬರ್ ೭ರಂದು ಮರಣ ಹೊಂದಿದನು ; ಇವನ ಸಮಾಧಿಯ ಮುಂದೆ ಪ್ರಜೆಗಳೆಲ್ಲರ ಅರಿವಿಗಾಗಿ ಈ ಶಾಸನವನ್ನು ರಾಜನು ಬರೆಸಿದನು. ಶಾಸನದ ಕೊನೆಯಲ್ಲಿ ಇಂಗ್ಲಿಷಿನಲ್ಲಿ ವೀರ್‌ರಾಜೆಂದಿರ್ ಎಂದು ರಾಜನ ಸಹಿ ಇದೆ. ಈ ಸಮಾಧಿಯು ರಾಜರ ಗದ್ದಿಗೆಗಳ ಆವರಣದಲ್ಲಿದೆ. ಲಿಂಗಮುದ್ರೆ ಸಹಿತವಾದ ಗಡಿಕಲ್ಲುಗಳ ಮೇಲೆ ಕಲಿ ೪೯೦೯ ಎಂದು ಬರೆಯಲಾಗಿದೆ ; ಇದು ಕ್ರಿ.ಶ. ೧೮೦೭-ಕ್ಕೆ ಹೊಂದಿಕೆ ಯಾಗುತ್ತದೆ (೧೬). ಇದರಿಂದ ಈ ಸ್ಥಳವನ್ನು ರಾಜಮನೆತನದ ಪ್ರಮುಖರ ಸಮಾಧಿಸ್ಥಳಕ್ಕಾಗಿ ಕಲಿ ೪೯೦೯ರಲ್ಲಿ ನಿರ್ದಿಷ್ಟಗೊಳಿಸ ಲಾಯಿತೆಂದು ಗೊತ್ತಾಗುತ್ತದೆ. ಅದೇವರ್ಷ ವೀರರಾಜೇಂದ್ರ (I)ನ ಪತ್ನಿಯು ಮರಣಹೊಂದಿದಳು. ದೇವಮ್ಮಾಜಿಯ ಸಮಾಧಿಯ ಮೇಲೆ ಎತ್ತರವಾದ ಕಟ್ಟಡಗಳನ್ನು ಅದೇವರ್ಷ ಅರಸನು ನಿರ್ಮಿಸಲು ತೊಡಗಿದನೆಂದು ತೋರುತ್ತದೆ. ಆದರೆ ಮರುವರ್ಷ ವೀರರಾಜೇಂದ್ರ (I)ನೇ ಮರಣಹೊಂದಿ, ಅವನ ದೇಹವನ್ನೂ ಕೂಡ ಇದೇ ಕಟ್ಟಡದಲ್ಲಿ ಸಮಾಧಿ ಮಾಡಲಾಯಿತು. ಈ ಕಟ್ಟಡದ ನಿರ್ಮಾಣಕಾರ್ಯವು ಅವನ ಸೋದರನಾದ ಇಮ್ಮಡಿ ಲಿಂಗರಾಜೇಂದ್ರವಡೆಯನ ಕಾಲದಲ್ಲಿ ಪೂರ್ಣಗೊಂಡಿತು. ಚಿಕ್ಕವೀರರಾಜೇಂದ್ರನು ತನ್ನ ತಂದೆ ಲಿಂಗರಾಜೇಂದ್ರವಡೆಯರಿಗಾಗಿ ಕ್ರಿ.ಶ. ೧೮೨೦ರಲ್ಲಿ ನಿರ್ಮಿಸಿದ ಸಮಾಧಿಯು ವೀರರಾಜೇಂದ್ರನ ಸಮಾಧಿಯ ಬಲಭಾಗದಲ್ಲಿದ್ದು ಅದರ ವಿನ್ಯಾಸವನ್ನೇ ಹೋಲುತ್ತದೆ. ಈ ಎರಡೂ ಕಟ್ಟಡಗಳ ಎಲ್ಲಾ ಬಾಗಿಲುವಾಡ ಮತ್ತು ಕಿಟಕಿಗಳ ಮೇಲೆ 'ವಿ' ಎಂದು ದೊರೆಯ ಹೆಸರನ್ನು ಸೂಚಿಸುವ ಕನ್ನಡಾಕ್ಷರವನ್ನು ಕೆತ್ತಲಾಗಿದೆ. ಈ ಎರಡು ಸಮಾಧಿ ಕಟ್ಟಡಗಳು, ಮಾದಾಪುರದಲ್ಲಿರುವ ಒಂದನೆಯ ಲಿಂಗರಾಜೇಂದ್ರನ ಸಮಾಧಿ ಮತ್ತು ಇಮ್ಮಡಿ ಲಿಂಗರಾಜೇಂದ್ರನು ಕ್ರಿ.ಶ. ೧೮೨೦ರಲ್ಲಿ ಮಡಿಕೇರಿಯಲ್ಲಿ ಕಟ್ಟಿಸಿದ ಓಂಕಾರೇಶ್ವರ ದೇವಾಲಯ—ಇವೆಲ್ಲವೂ ಇಂಡೋಸಾರ್ಸನಿಕ್ ಶೈಲಿಯಲ್ಲಿದ್ದು, ಎತ್ತರವಾದ ಜಗತಿಯ ಮೇಲೆ, ಚತುರಸ್ರಾಕಾರದ ವಿನ್ಯಾಸದಲ್ಲಿ ಕಟ್ಟಲಾಗಿದ್ದು, ಮಧ್ಯದಲ್ಲಿ ಗುಮ್ಮಟ ಹಾಗೂ ನಾಲ್ಕು ಮೂಲೆಗಳಲ್ಲಿ ಸ್ತಂಭಗೋಪುರ (Minaret)ಗಳಿವೆ. ಪ್ರತಿಯೊಂದು ಕಟ್ಟಡದ ಗುಮ್ಮಟದ ಮೇಲೆಯೂ ಲೋಹದ ಕಲಶ, ಮತ್ತು ಅದರ ಮೇಲೆ ರಾಜಮುದ್ರೆ ಸಹಿತವಾದ ಲೋಹದ ಧ್ವಜ ಇವೆ.

ಲಿಂಗರಾಜೇಂದ್ರವಡೆಯರ ಕಾಲದ ೨೬ನೆಯ ಶಾಸನವು ವಿಶಿಷ್ಟವಾದುದಾಗಿದ್ದು, ಬಲ್ಯಾಟರೆ ಕಾಡಿನಲ್ಲಿ ರಾಜನ ಆನೆಯ ಬೇಟೆಗೆ ಸಂಬಂಧಪಡುತ್ತದೆ. ಈ ಬೇಟೆಯಲ್ಲಿ ರಾಜನು ೩೪ ಆನೆಗಳನ್ನು ಕೊಂದು, ೮ ಆನೆಮರಿಗಳನ್ನು ಸೆರೆಹಿಡಿದನೆಂದು ಈ ಶಾಸನವು ತಿಳಿಸುತ್ತದೆ. ಈ ಘಟನೆಯ ನೆನಪಿಗಾಗಿ ಅವನು ಪಾಡಿಯ ಸುಬ್ರಾಯ ದೇವರಿಗೆ ಕ್ರಿ.ಶ. ೧೮೧೦ರಲ್ಲಿ ಸುಂದರವಾದ ಬೆಳ್ಳಿ ಆನೆಯೊಂದನ್ನು ಮಾಡಿಸಿಕೊಟ್ಟನು. ಸುಮಾರು ಒಂದು ಅಡಿ ಎತ್ತರದ ಈ ಆನೆಯು ಬಹಳ ಸುಂದರವಾಗಿದೆ.

ಲಿಂಗರಾಜೇಂದ್ರ ವಡೆಯನು ಕಟ್ಟಿಸಿದ ಕಟ್ಟಡಗಳ ವಿವರಗಳು ೮ನೆಯ ಶಾಸನದಲ್ಲಿ ನಿರೂಪಿತವಾಗಿವೆ. ಪರ್ಷಿಯನ್ ಮತ್ತು ಕನ್ನಡ ಲಿಪಿಗಳೆರಡರಲ್ಲಿಯೂ ಇರುವ ಈ ಶಾಸನವು ಲಿಂಗರಾಜೇಂದ್ರನು ಮಡಿಕೇರಿಯಲ್ಲಿ ಗುಡ್ಡವನ್ನು ಕಡಿದು ವಿಶಾಲವೂ, ಸುಂದರವೂ ಆದ ಅರಮನೆಯನ್ನು ನಿರ್ಮಿಸಿದನೆಂದು ಹೇಳುತ್ತದೆ. ಕ್ರಿ. ಶ. ೧೮೧೨, ಡಿಸೆಂಬರ್, ೭ರಂದು ಆರಂಭವಾದ ಈ ಅರಮನೆಯ ನಿರ್ಮಾಣಕ್ಕೆ ಎರಡು ವರ್ಷ ಒಂದು ತಿಂಗಳು ಮತ್ತು ಮೂರು ದಿನಗಳು ಹಿಡಿಯಿತು. ಎರಡು ಅಂತಸ್ತುಗಳಿಂದ ಕೂಡಿದ ಈ ಕಟ್ಟಡದಲ್ಲಿ ಈಚೆಗೆ ಕೆಲವು ಬದಲಾವಣೆಗಳಾಗಿವೆ. ಆದರೂ, ಇದರ ಗೋಡೆಗಳ ಮೇಲೆ ರಾಜಮುದ್ರೆಸಹಿತವಾದ ಕೆಲವು ಮೂಲ ವರ್ಣಚಿತ್ರಗಳನ್ನು ನೋಡಬಹುದು. ಇಲ್ಲಿಯ ಗೋಡೆಯೊಂದಕ್ಕೆ ಹಿತ್ತಾಳೆ ತಗಡಿನಲ್ಲಿ ತಯಾರಿಸಿದ ಲಿಂಗರಾಜೇಂದ್ರವಡೆಯರ ರಾಜಮುದ್ರೆಯನ್ನು ಸೇರಿಸಲಾಗಿದೆ.

ಈ ರಾಜನ ಇನ್ನೊಂದು ಮಹತ್ಸಾಧನೆಯೆಂದರೆ ಓಂಕಾರೇಶ್ವರ ದೇವಾಲಯದ ನಿರ್ಮಾಣ. ಈ ದೇವಾಲಯದ ಮುಂಬದಿಯ ಗೋಡೆಗೆ ಸೇರಿಸಿರುವ ಹಿತ್ತಾಳೆ ತಗಡಿನ ೯ನೆಯ ಶಾಸನ ಮತ್ತು ೧೨ನೆಯ ತಾಮ್ರಶಾಸನಗಳೆರಡರ ಕಾಲ ಕ್ರಿ. ಶ. ೧೮೨೦. ಇವು ಇಮ್ಮಡಿ ಲಿಂಗರಾಜೇಂದ್ರವಡೆಯರು ಮಡಿಕೇರಿಯಲ್ಲಿ ಓಂಕಾರೇಶ್ವರ ದೇವಾಲಯವನ್ನು ಕಟ್ಟಿಸಿದ ವಿಷಯವನ್ನು ನಿರೂಪಿಸುತ್ತವೆ. ಇಹಪರಗಳೆರಡರಲ್ಲಿಯೂ ಶಾಶ್ವತಫಲವನ್ನು ನೀಡುವ ಉತ್ತಮ ಕಾರ್ಯವನ್ನು ಮಾಡಬೇಕೆಂದು ನಿರ್ಧರಿಸಿದ ರಾಜನು ಸುಂದರವಾದ ಮತ್ತು ನೂತನವಾದ ಓಂಕಾರೇಶ್ವರ ದೇವಾಲಯದ ನಿರ್ಮಾಣ ಕಾರ್ಯವನ್ನು ೧೭೯೬೩೯೨ನೆಯ ಕಲಿದಿನದಂದು ಆರಂಭಿಸಿ, ಆ ಕಾರ್ಯ ಎರಡು ವರ್ಷ, ಒಂಬತ್ತು ತಿಂಗಳು ಮತ್ತು ಇಪ್ಪತ್ತೈದು ದಿನಗಳಲ್ಲಿ, ೧೭೯೭೪೨೧ನೆಯ ಕಲಿದಿನದಂದು, ಮುಗಿಸಿ ಓಂಕಾರೇಶ್ವರ ನಾಮಕ ಶಿವಲಿಂಗವನ್ನು ಅಲ್ಲಿ ಪ್ರತಿಷ್ಠಾಪಿಸಿದನು. ೧೨ನೆಯ ತಾಮ್ರಶಾಸನವೂ ಈ ವಿಷಯವನ್ನು ತಿಳಿಸುವುದಲ್ಲದೆ, ನಿತ್ಯಕಟ್ಲೆ ಮತ್ತು ವಿಶೇಷಕಟ್ಲೆ ಮುಂತಾದ ಸೇವೆಗಳ ಬಗ್ಗೆ ನೀಡಿದ

ಉತ್ತಾರಗಳ ವಿವರಗಳನ್ನೂ ಕೊಡುತ್ತದೆ. ಈ ದೇವಾಲಯದ ಲೆಕ್ಕಪತ್ರಗಳನ್ನು ಪ್ರತಿವರ್ಷವೂ ಪರಿಶೀಲಿಸಬೇಕೆಂದೂ ಶಾಸನದಲ್ಲಿ ಹೇಳಿದೆ. ದೇವಾಲಯದ ಮುಖ್ಯದ್ವಾರದ ಗೋಡೆಗೆ ಲಿಂಗರಾಜನ ಲೋಹದ ರಾಜಮುದ್ರೆಯನ್ನು ಸೇರಿಸಿದೆ. ದೇವಾಲಯದ ಕೆಲವು ಪಾತ್ರೆಗಳ ಮೇಲೆ, 'ಲಿಂ' ಎಂಬ ಅಕ್ಷರವಿದೆ. ಈ ಪಾತ್ರೆಗಳು ಆ ರಾಜನು ನೀಡಿದುವಾಗಿರಬೇಕು. ಬೆಳ್ಳಿತಟ್ಟೆಯೊಂದರ ಮೇಲೆ 'ಶ್ರೀ ಓಂಕಾರೇಶ್ವರ ದೇವಸ್ಥಾನ' ಎಂದು ಕೆತ್ತಿದೆ.

ಕೊಡಗು ಪ್ರದೇಶವು ಕಾಡಾನೆಗಳು ಹೇರಳವಾಗಿರುವ ದಟ್ಟವಾದ ಕಾಡುಗಳಿಂದ ಕೂಡಿದೆಯಾದಕಾರಣ ಇಲ್ಲಿಯ ರಾಜರಿಗೆ ಆನೆ ಬೇಟೆಯಲ್ಲಿ ಆಸಕ್ತಿ ಇದ್ದುದು ಸಹಜವೇ ಸರಿ. ಬಿದ್ದಂಡರ ಬೊಪ್ಪು ಆನೆ ಬೇಟೆಯಲ್ಲಿ ತನ್ನ ರಾಜನಿಗೆ ನೆರವು ನೀಡಿ ಅವನಿಂದ ನಿಷ್ಠಾವಂತ ಸೇವೆಗಾಗಿ ಪ್ರಶಂಸೆಯನ್ನು ಪಡೆದುದನ್ನು ಮತ್ತು ಒಂದನೆಯ ಲಿಂಗರಾಜೇಂದ್ರ ವಡೆಯನು ಬಲ್ಯಾಟರೆ ಕಾಡಿನಲ್ಲಿ ೩೪ ಆನೆಗಳನ್ನು ಕೊಂದು, ೮ ಆನೆ ಮರಿಗಳನ್ನು ಜೀವಸಹಿತವಾಗಿ ಸೆರೆಹಿಡಿದನೆಂಬ ವಿಷಯವನ್ನು ಮೇಲೆ ಗಮನಿಸಿದ್ದೇವೆ. ಆದರೆ ವೀರರಾಜೇಂದ್ರನ ಸಾಧನೆ ಇವೆರಡಕ್ಕಿಂತಲೂ ಹೆಚ್ಚಿನದು. ಇತರ ಶಾಸನಗಳಿಂದ ಸಾಕಷ್ಟು ವಿಭಿನ್ನವಾಗಿರುವ ಈ ೩ನೆಯ ಶಾಸನದ ಕಾಲ ಕ್ರಿ. ಶ. ೧೮೨೪. ಇದು ಇಮ್ಮಡಿ ವೀರರಾಜೇಂದ್ರನು ತನ್ನ ಆನೆ ಬೇಟೆಯಲ್ಲಿ ತೋರಿದ ಪರಾಕ್ರಮವನ್ನು ವರ್ಣಿಸುತ್ತದೆ. ಈ ರಾಜನು "ಸಧರ್ಮ ಸುಶೀಲ ಸುಚರ್ಯದಿಂದ" ರಾಜ್ಯವಾಳುತ್ತಿದ್ದ ಕಾಲದಲ್ಲಿ ಇವನ ರಾಜ್ಯದಲ್ಲಿ ಆನೆಗಳು ಮಿತಿಮೀರಿ ಫಲಪೈರುಗಳನ್ನು ನಾಶಗೊಳಿಸಿ, ದಾರಿಗರಿಗೆ ಮತ್ತು ಮನೆಗಳಿಗೆ ತೊಂದರೆಯುಂಟುಮಾಡತೊಡಗಿದವು. ಇವುಗಳಿಂದ ತಮ್ಮನ್ನು ಪಾರುಮಾಡಬೇಕೆಂದು ಜನರು ರಾಜನನ್ನು ಕೇಳಿಕೊಂಡರು. ದುಷ್ಟನಿಗ್ರಹ ಮತ್ತು ಶಿಷ್ಟಪರಿಪಾಲನೆಯೇ ರಾಜಧರ್ಮವೆಂದು ಯೋಚಿಸಿದ ರಾಜನು ಈ ತೊಂದರೆಗಳನ್ನು ಪರಿಹರಿಸಲು ತಕ್ಕ ಸಾಮರ್ಥ್ಯವನ್ನು ಕರುಣಿಸಬೇಕೆಂದು ಗೌರೀಧವನನ್ನು ಪ್ರಾರ್ಥಿಸಿದನು. ಆ ಸಾಂಬಶಂಕರನ ಪರಮಕೃಪಾನುಗ್ರಹದಿಂದ ಅವನು ೧೭೯೮೭೮ನೆಯ ಕಲಿದಿನದಂದು ಮದೋನ್ಮತ್ತ ಆನೆಗಳ ಸಮೂಹದಿಂದ ಕೂಡಿದ ಅರಣ್ಯವನ್ನು ಹೊಕ್ಕು, ಒಟ್ಟು ಎರಡುವರ್ಷ, ಒಂದು ತಿಂಗಳು ಮತ್ತು ಇಪ್ಪತ್ತೈದು ದಿನಗಳಲ್ಲಿ (ಕ್ರಿ.ಶ. ೧೮೨೨ರ ಮಾರ್ಚಿಯಿಂದ ೧೮೨೪ರ ಏಪ್ರಿಲ್‌ವರೆಗೆ) ಅಂದರೆ ೧೭೯೮೯೧೩ನೆಯ ಕಲಿದಿನದವರೆಗೆ ತನ್ನ ಪರಾಕ್ರಮದಿಂದ ಬೇರೆ ಬೇರೆ ದಿನಗಳಲ್ಲಿ ಆ ಹಾವಳಿಯನ್ನು ತಪ್ಪಿಸಿದನು.

ಈ ಶಾಸನದಲ್ಲಿ ಮರಣ ಹೊಂದಿದ ಹಾಗೂ ಜೀವಸಹಿತವಾಗಿ ಸೆರೆಸಿಕ್ಕ ಆನೆಗಳ ಸಂಖ್ಯೆ, ಅವುಗಳನ್ನು ಬೇಟೆಯಾಡಿದ ಕಾಲ ಹಾಗೂ ಸ್ಥಳಗಳು ಮೊದಲಾದುವನ್ನು ವಿವರವಾಗಿ ತಿಳಿಸಲಾಗಿದೆ. ಹೀಗೆ ಬೇಟೆಯಾಡಿದ ಪ್ರದೇಶಗಳು ಕೊಡಗಿನ ಪೂರ್ವ ಮತ್ತು ದಕ್ಷಿಣದಲ್ಲಿ ಸಂಜರಾಯಪಟ್ಟಣ ತಾಲ್ಲೂಕು, ಉಲುಗುಲಿ—ಮೂಡಿಗೇರಿ ನಾಡು, ಹೊರೂರು ನೂರೊಕ್ಕಲುನಾಡು, ಕೊಡಗು—ಶ್ರೀರಂಗಪಟ್ಟಣ, ಹಾಗೂ ಕಿಗ್ಗಟ್ಟುನಾಡುಗಳಲ್ಲಿರುವ ಕಾಡುಗಳು. ಒಟ್ಟು ಬೇಟೆಯಾಡಿದ ದಿನಗಳು ೩೮; ಈ ಕಾಲದಲ್ಲಿ ರಾಜನು ಸ್ವಹಸ್ತದಿಂದ ಕೊಂದ ಆನೆಗಳ ಸಂಖ್ಯೆ ೨೩೩ ಮತ್ತು ಅವನ ಅಪ್ಪಣೆ ಪ್ರಕಾರ ಪಟುಭಟರು 'ಪ್ರಾಣಯುಕ್ತವಾಗಿ ಪಾಣಿಗ್ರಹಣವೆಸಗಿದ' ಆನೆಗಳು ೧೮೧.

ಕೊಡಗಿನ ರಾಜರ ಕಾಲಕ್ಕೆ ಸೇರುವ ಇನ್ನೂ ಕೆಲವು ಶಾಸನಗಳು ನಮಗೆ ದೊರೆಯುತ್ತವೆ. ಆದರೆ, ಈ ಶಾಸನಗಳಲ್ಲಿ ಕಾಲದ ನಿರ್ದೇಶವಿಲ್ಲ. ಇಲ್ಲವೇ ನೀಡಿರುವ ಕಾಲವಿವರಗಳು ತಾಳೆ ನೋಡಲು ಸಾಲುವುದಿಲ್ಲ. ೩೩ನೆಯ ಶಾಸನವು ವೀರವಡೆಯ ಮತ್ತು ಹಾಲೇರಿ ಮುಮ್ಮದ್ಯೆ ಅರಸ ಎಂಬುವರನ್ನು ಉಲ್ಲೇಖಿಸುತ್ತದೆ. ಈ ವೀರವಡೆಯ ದೊಡ್ಡ ವೀರಪ್ಪನ ಮೊಮ್ಮಗನಾದ ಚಿಕ್ಕವೀರಪ್ಪನಾಗಿರಬಹುದೆಂದು ತೋರುತ್ತದೆ. ಮುಮ್ಮದ್ಯೆ ಅರಸನು ಕ್ರಿ. ಶ. ೧೭೬೬ ರಿಂದ ೧೭೭೦ರವರೆಗೆ ಹೊರಮಲೆಯಿಂದ ಆಳಿದ ಮುದ್ದುರಾಜನಾಗಿರಬಹುದೇ ಎಂಬುದನ್ನು ನಿಶ್ಚಿತವಾಗಿ ಹೇಳಲಾಗದು. ಈ ಶಾಸನವು ಹಾಲೇರಿಯ ಐಗಳಮಠಕ್ಕೆ ನೀಡಿದ ದತ್ತಿಯನ್ನು ಕುರಿತಾಗಿದೆ. ೧೦೮ನೆಯ ಶಾಸನವು ಎಡತೊರೆ ಮಠವನ್ನು ಉಲ್ಲೇಖಿಸುತ್ತದೆ ಮತ್ತು ಆ ಮಠದ ಸಿದ್ಧಲಿಂಗಸ್ವಾಮಿಯವರಿಗೆ ದತ್ತಿಯನ್ನು ನೀಡಿದಂತೆ ತೋರುತ್ತದೆ. ೧೦೩ನೆಯ ಶಾಸನದಲ್ಲಿ ಚೀಳಷಾಕಸ್ವಾಮಿಯ ವಿರಕ್ತಮಠವೊಂದರ ಉಲ್ಲೇಖವಿದೆ. ೧೦೫ನೆಯ ಶಾಸನವು ಗಂಗಾಧರ ದೇವರನ್ನು ಉಲ್ಲೇಖಿಸುತ್ತದೆ. ಈ ದೇವರ ದೇವಾಲಯವನ್ನು ವೀರರಾಜೇಂದ್ರ ವಡೆಯನು ನಿರ್ಮಿಸಿರಬೇಕೆಂದು ತೋರುತ್ತದೆ.

ಮಡಿಕೇರಿಯಲ್ಲಿ ರಾಜರ ಗದ್ದಿಗೆಗಳ ಆವರಣದಲ್ಲಿಯೇ ರಾಜಗುರು ರುದ್ರಪ್ಪನಿಗಾಗಿ ಕಟ್ಟಿದ ಸಮಾಧಿಯೊಂದಿದೆ. ಇದು ರಾಜರ ಗದ್ದಿಗೆಗಳ ವಿನ್ಯಾಸವನ್ನೇ ಹೋಲುತ್ತದೆಯಾದರೂ, ಅವುಗಳ ಗಾಂಭೀರ್ಯವನ್ನು ಹೊಂದಿಲ್ಲ. ಈ ಗುರುಗಳ ಗದ್ದಿಗೆಯನ್ನು ಕ್ರಿ.ಶ. ೧೮೩೪ರಲ್ಲಿ ದಿವಾನ್ ಚೆಪ್ಪುಡಿರ ಪೊನ್ನಪ್ಪನು ಕಟ್ಟಿಸಿದನು. ಇದರ ಗೋಡೆಯ ಮೇಲಿರುವ ಶಾಸನದಿಂದ (೧೫) ಕಾರತ್ತು ಮೂರ್ನಾಡಿನ ಬಾಡಗ ಗ್ರಾಮಕ್ಕೆ ಸೇರಿದ ಸುಬಯ್ಯನೆಂಬುವನು ಇದನ್ನು ಕಟ್ಟಿಸಿದನೆಂದು ಹೇಳಬಹುದು.

ಕೊಡಗಿನ ರಾಜರು ವೀರಶೈವ ಮತಸ್ಥರು ಹಾಗೂ ಶಿವಗಂಗೆಯ ಮೇಲಣ ಗವಿಮಠದ ಶಾಖೆಯಾದ ಸಿದ್ಧಾಪುರ ಮಠದ ಸ್ವಾಮಿಯ ಶಿಷ್ಯರೆಂದು ಮೇಲಿನ ಶಾಸನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಇವರು ಅಬ್ಬಿಮಠ, ಮಾಪಾಪುರ, ದನಗಲ್ಲು ಮತ್ತು ಇತರ ಸ್ಥಳಗಳಲ್ಲಿ ಮುರಿಗಿಮಠದ ಶಾಖೆಗಳನ್ನು ಸ್ಥಾಪಿಸಿ ಅವುಗಳಿಗೆ ಕೆಲವು ದತ್ತಿಗಳನ್ನು ನೀಡಿದರು.

ಕೊಡಗಿನ ರಾಜರ ಕಾಲದ ಕೆಲವು ದೀರ್ಘವೃತ್ತಾಕಾರದ, ಲೋಹದ ರಾಜಮುದ್ರೆಗಳಿವೆ. ಇವುಗಳ ಮಧ್ಯಭಾಗದಲ್ಲಿ ಸಮಾನ ವೃತ್ತಗಳಿವೆ. ಒಳಗಣ ವೃತ್ತದಲ್ಲಿ ರಾಜನ ಹೆಸರಿನ ಮೊದಲ ಅಕ್ಷರವನ್ನು ಕೆತ್ತಲಾಗಿದೆ. ಲಿಂಗರಾಜೇಂದ್ರ ವಡೆಯರ ಕಾಲದ ರಾಜಮುದ್ರೆಗಳಲ್ಲಿ 'ಲಿಂ' ಎಂಬ ಕನ್ನಡ ಅಕ್ಷರವೂ, ವೀರರಾಜೇಂದ್ರವಡೆಯರ ಕಾಲದ ರಾಜಮುದ್ರೆಗಳಲ್ಲಿ 'ವಿ' ಎಂಬ ಕನ್ನಡಾಕ್ಷರವೂ ಕಂಡುಬರುತ್ತವೆ. ಈ ಅಕ್ಷರಗಳ ಕೆಳಗೆ ಕ್ರಿಸ್ತಶಕ ಇಲ್ಲವೆ ಕಲಿಯುಗದ ವರ್ಷವನ್ನು ಬರೆಯಲಾಗಿದೆ. ರಾಜ ಮುದ್ರೆಯೊಳಗೆ ಎರಡು ಸಮಾನ ವೃತ್ತಗಳ ನಡುವೆ, ಮಧ್ಯದ ಅಕ್ಷರದ ಸುತ್ತಲೂ ಇಂಗ್ಲಿಷಿನಲ್ಲಿ 'ಮಹಾರಾಜ ಲಿಂಗರಾಜೆಂದರ್ ವಡೀರ್' ಅಥವಾ 'ಮಹಾರಾಜ ವೀರರಾಜೇಂದರ್ ವಡೀರ್' ಎಂದು ರಾಜನ ಹೆಸರನ್ನು ಕೆತ್ತಲಾಗಿದೆ. ರಾಜಮುದ್ರೆಯ ಹೊರಗಣ ಸಮಾನ ವೃತ್ತದ ಮಧ್ಯೆ ಇರುವ ಸ್ಥಳದಲ್ಲಿ ರಾಜನ ಹೆಸರು, ರಾಜ್ಯದ ಹೆಸರು ಮತ್ತು ಕಲಿವರ್ಷವನ್ನು ಪರ್ಷಿಯನ್ ಲಿಪಿಯಲ್ಲಿ ಬರೆಯಲಾಗಿದೆ. ಲಿಂಗರಾಜೇಂದ್ರನು ಕಟ್ಟಿಸಿದ ಓಂಕಾರೇಶ್ವರ ದೇವಾಲಯದ ಮಹಾದ್ವಾರ ಹಾಗೂ ಅರಮನೆಯ ಗೋಡೆಗಳ ಮೇಲೆ ಇಂತಹ ರಾಜಮುದ್ರೆಗಳು ಕಂಡುಬರುತ್ತವೆ. ಅರಮನೆಯ ಗೋಡೆಗಳ ಮೇಲಿರುವ ವರ್ಣ ಚಿತ್ರಗಳ ಮೇಲೆಯೂ ಈ ರಾಜಮುದ್ರೆಗಳಿವೆ. 'ಲಿಂ' ಎಂಬ ಅಕ್ಷರವಿರುವ ಇನ್ನೊಂದು ರಾಜಮುದ್ರೆಯು ಪಾಡಿಯ ಇಗ್ಗುತಪ್ಪ ದೇವಾಲಯದಲ್ಲಿದೆ. ಮಾದಾಪುರದಲ್ಲಿರುವ ಲಿಂಗರಾಜೇಂದ್ರವಡೆಯರ ಸಮಾಧಿಯ ಶಿಖರದ ಮೇಲಿರುವ ಹಿತ್ತಾಳೆಯ ಧ್ವಜದ ಮೇಲೆ ಲಿಂಗರಾಜೇಂದ್ರನ ಮರಣ ಹಾಗೂ ಅವನ ಸಮಾಧಿಯ ಮೇಲೆ ದೇವಾಲಯದ ನಿರ್ಮಾಣ—ಇವುಗಳನ್ನು ನಿರೂಪಿಸುವ ಶಾಸನವಿದೆ. ಈ ಧ್ವಜದ ಮಧ್ಯದಲ್ಲಿ ರಾಜಮುದ್ರೆಯಿದ್ದು ಅದರ ನಡುವೆ 'ವಿ' ಎಂಬ ಅಕ್ಷರವಿದೆ. ಇದು ಈ ಶಾಸನವು ಲಿಂಗರಾಜೇಂದ್ರನ ಮಗನಾದ ವೀರರಾಜೇಂದ್ರನ ಕಾಲದಲ್ಲಿ ಹೊರಡಿಸಲಾದುದೆಂಬುದನ್ನು ಸೂಚಿಸುತ್ತದೆ. ಅದರ ಸುತ್ತಲೂ ಕನ್ನಡ ಲಿಪಿಯಲ್ಲಿ ಲಿಂಗರಾಜೇಂದ್ರನ ಹೆಸರನ್ನು ಮತ್ತು ಅವನ ಮರಣದ ಕಾಲವನ್ನು ಸೂಚಿಸುವ ಕಲಿವರ್ಷ ೪೮೮೧ ಎಂಬುದನ್ನು ಕೆತ್ತಲಾಗಿದೆ.

ರಾಜರ ಗದ್ದಿಗೆಗಳ ಮೇಲೆ ಹಾಗೂ ಓಂಕಾರೇಶ್ವರ ದೇವಾಲಯಗಳ ಮೇಲೆಯೂ ಇದೇ ಬಗೆಯ ಹಿತ್ತಾಳೆ ಪತಾಕೆಗಳಿದ್ದು, ಅವುಗಳ ಮೇಲೆ ವೀರರಾಜೇಂದ್ರನ ಇಲ್ಲವೇ ಲಿಂಗರಾಜೇಂದ್ರನ ರಾಜಮುದ್ರೆಗಳಿವೆ.

## ಆಂಗ್ಲರ ಕಾಲ

ಕೊಡಗಿನಲ್ಲಿ ಆಂಗ್ಲರ ಆಳ್ವಿಕೆಯ ಕಾಲದ ಹತ್ತಕ್ಕೂ ಹೆಚ್ಚು ಶಾಸನಗಳು ದೊರೆತಿವೆ. ಇವೆಲ್ಲವೂ ಹೆಚ್ಚಾಗಿ ವೈಯಕ್ತಿಕ ದಾಖಲೆಗಳಾಗಿದ್ದು ರಾಜಕೀಯ ಇತಿಹಾಸಕ್ಕೆ ಸಂಬಂಧಪಡದಿದ್ದರೂ, ಇವುಗಳಲ್ಲಿ ಕೆಲವು ಕುತೂಹಲಕಾರಿಯಾಗಿವೆ. ಕಲಿವರ್ಷ ೪೯೩೬, ಜಯ ಸಂವತ್ಸರ ಎಂದರೆ ಕ್ರಿ. ಶ. ೧೮೩೪ರ ಶಾಸನವೇ (ನಂ. ೨೭) ಈ ಕಾಲದ ಪ್ರಾಚೀನ ಶಾಸನ. ಈ ಶಾಸನದಲ್ಲಿ ತಿಂಗಳು, ತಿಥಿ ಇತ್ಯಾದಿ ವಿವರಗಳು ಕಂಡುಬರುವುದಿಲ್ಲವಾದುದರಿಂದ, ಕೊಡಗು ಪ್ರದೇಶವು ಬ್ರಿಟಿಷರ ಅಧೀನಕ್ಕೊಳಪಡುವ ಮೊದಲೇ, ಅಂದರೆ ಕ್ರಿ. ಶ. ೧೮೩೪, ಏಪ್ರಿಲ್ ೬ಕ್ಕಿಂತ ಮೊದಲೇ, ಈ ಶಾಸನವನ್ನು ಹೊರಡಿಸಲಾಯಿತೇ ಅಥವಾ ಅನಂತರವೇ ಎಂಬುದನ್ನು ನಿರ್ದಿಷ್ಟವಾಗಿ ತಿಳಿಯಲು ಸಾಧ್ಯವಿಲ್ಲ. ಇದರಲ್ಲಿ ಅಪ್ಪಾರಂಡ ಬೋಪುವು ಪಾಡಿ ಸುಬ್ರಾಯ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದ ಸಂಗತಿ ನಿರೂಪಿತವಾಗಿದೆ. ಪಾಡಿಯ ಸುಬ್ರಹ್ಮಣ್ಯ ದೇವತೆಯು ಕೊಡಗಿನ ಜನರಲ್ಲಿ ಇಗ್ಗುತಪ್ಪ ಎಂಬ ಹೆಸರಿನಲ್ಲಿ ಪ್ರಖ್ಯಾತವಾಗಿದೆ.

೨೪ನೆಯ ಶಾಸನದ ಕಾಲ ಕ್ರಿ. ಶ. ೧೮೩೯, ನವೆಂಬರ್ ೧೫. ಈ ಕಾಲದಲ್ಲಿ ಕರ್ನಲ್ ಫ್ರೇಜರನೆಂಬ ಕಮಿಷನರನ ಅಧೀನದಲ್ಲಿ ಕ್ಯಾಪ್ಟನ್ ಸಿ. ಎಫ್.ಲೇ ಹಾರ್ಡಿಯು ಕೊಡಗಿನ ಮೊಟ್ಟಮೊದಲನೆಯ ಸೂಪರಿಂಟೆಂಡೆಂಟನಾಗಿದ್ದನು. ಮೂಲ ಕಾವೇರಿಯ ಉಪಯೋಗಕ್ಕಾಗಿ ಒಂದು ಬೆಳ್ಳಿಯ ಪೀಠ, ಒಂದು ಪ್ರಭಾವಳಿ, ಮೂರು ಚಿನ್ನದ ಛತ್ರಿ, ಎರಡು ಸೂರ್ಯಪಾನ ಮತ್ತು ಎರಡು ಪತಾಕೆಗಳನ್ನು ದಿವಾನ್ ಪೊನ್ನಪ್ಪಯಿ ಬೊಪ್ಪವು ಮಾಡಿಸಿದುದಾಗಿ ಈ ಶಾಸನದಿಂದ ತಿಳಿದುಬರುತ್ತದೆ. ಮೂಲ ಕಾವೇರಿಯ ಜಾತ್ರೆಗೆ ಬಂದ ಭಕ್ತಾದಿಗಳು ಕೊಟ್ಟ ಕಾಣಿಕೆ, ಹರಕೆಗಳಿಂದ ಬಂದ ಹಣದಲ್ಲಿ, ೧೨೪೩ ರೂಪಾಯಿಗಳ ವೆಚ್ಚದಲ್ಲಿ, ಇವುಗಳನ್ನು ಮಾಡಿಸಲಾಯಿತು.

ಕ್ರಿ. ಶ. ೧೮೪೦–೪೧ನೆಯ ವರ್ಷದ ೧೦೬ನೆಯ ಶಾಸನದಿಂದ ಕಿಗ್ಗಟ್ಟು ಹತ್ತು ನಾಡಿನ ರೈತರು ಲಕ್ಷ್ಮಣ ತೀರ್ಥದ ಬಳಿ ಇರುವ ಇರ್ಪಿಯ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದರೆಂದು ತಿಳಿದುಬರುತ್ತದೆ. ಮಾದಾಪುರದಲ್ಲಿರುವ ೩೦ನೆಯ ಶಾಸನವು ಕ್ರಿ. ಶ. ೧೮೪೩ರಲ್ಲಿ ಸೋಮಶೇಖರ ಶಿವಯೋಗಿಯು ಲಿಂಗರಾಜೇಂದ್ರವಡೆಯರ ಗದ್ದಿಗೆಯ ಮೇಲೆ ಕಲಶ ಸ್ಥಾಪನೆ ಮಾಡಿದ ವಿಷಯವನ್ನು ತಿಳಿಸುತ್ತದೆ. ಈ ಸೋಮಶೇಖರ ಶಿವಯೋಗಿಯು ಮುರಿಗಾಸ್ವಾಮಿಯ ಚರಮೂರ್ತಿಗಳಾದ ಶಾಂತವೀರಸ್ವಾಮಿಯ ಶಿಷ್ಯ.

ಕ್ರಿ. ಶ. ೧೮೫೬ಕ್ಕೆ ಸೇರುವ ೪೯ನೆಯ ಶಾಸನವು ಕುತೂಹಲಕಾರಿಯಾಗಿದೆ. ಇದು ಬೆಟ್ಟಿಯತ್ತು ನಾಡಿನ ಕುಂದ ಬೆಟ್ಟದ ಮಹಾದೇವ ದೇವಾಲಯದ ಜೀರ್ಣೋದ್ಧಾರವನ್ನು ಕುರಿತು ತಿಳಿಸುತ್ತದೆ. ಬೆಟ್ಟಿಯತ್ತು ನಾಡು ಮತ್ತು ಅಮ್ಮತ್ತಿನಾಡಿನ

ತಕ್ಕಮುಖ್ಯಸ್ತರು ಒಮ್ಮತಕ್ಕೆ ಬಂದು ಕಲಿದಿನ ೧೮೧೦೦೭೦ರಂದು ಈ ಜೀರ್ಣೋದ್ಧಾರ ಕಾರ್ಯವನ್ನು ಕೈಗೊಂಡರು. ತಕ್ಕರು ಕೊಡಗಿನಲ್ಲಿ ಗ್ರಾಮ ಮತ್ತು ನಾಡಿನ ಮುಖ್ಯಸ್ತರು. ಪ್ರತಿಯೊಂದು ಗ್ರಾಮ ಮತ್ತು ನಾಡಿನ ಕೊಡವ ಕುಟುಂಬಗಳಿಂದ ಇವರನ್ನು ಆರಿಸಲಾಗುತ್ತದೆ. ಇವರು ಸಾಮಾಜಿಕ ಮತ್ತು ಇತರ ಯಾವುದೇ ಬಗೆಯ ಭಿನ್ನಾಭಿಪ್ರಾಯಗಳನ್ನು ಪರಿಹರಿಸುವ ಹಾಗೂ ಸಾಮಾಜಿಕ ಮತ್ತು ಧಾರ್ಮಿಕ ಪದ್ಧತಿಗಳ ಅನುಷ್ಠಾನಕ್ಕೆ ಸಂಬಂಧಿಸಿದ ಮೇಲ್ವಿಚಾರಣೆ ನಡೆಸುವವರು. ಕೆಲವು ಕುಟುಂಬಗಳಲ್ಲಿ ಈ ಅಧಿಕಾರ ವಂಶಪಾರಂಪರ್ಯವಾಗಿರುವುದಾಗಿ ತಿಳಿದುಬರುತ್ತದೆ. ಪ್ರಸ್ತುತ ಶಾಸನವು ದೇವಾಲಯದ ಜೀರ್ಣೋದ್ಧಾರ ಕಾರ್ಯಕ್ಕೆ ನೆರವಾದ ಪ್ರಮುಖ ಜನರ ಪಟ್ಟಿಯನ್ನು, ಅವರು ನೀಡಿದ ನೆರವನ್ನು ವಿವರಿಸುತ್ತದೆ. ಇವರಲ್ಲಿ ನಂದಿವಿಗ್ರಹವನ್ನು ಮಾಡಿಸಲು ನೆರವಾದ ಕುಂದಗ್ರಾಮದ ಜಹಗೀರದಾರನಾದ ಹಯತ್‌ಖಾನ್‌ಸಾಬಿ ಎಂಬ ಮುಸ್ಲಿಮನೂ ಒಬ್ಬನು.

ಕಾಲಾನುಪೂರ್ವಿಯ ದೃಷ್ಟಿಯಿಂದ ಆ ನಂತರದ ಶಾಸನಗಳೆಂದರೆ ಮಡಿಕೇರಿಯ ಕನ್ನಿಕಾಪರಮೇಶ್ವರಿ ದೇವಾಲಯದ ನಿರ್ಮಾಣಕ್ಕೆ ಸಂಬಂಧಿಸುವ ೧೭ ಮತ್ತು ೧೮ನೆಯ ಶಾಸನಗಳು. ಮೊದಲನೆಯ ಶಾಸನದಲ್ಲಿ ಕ್ರಿ. ಶ. ೧೮೭೪, ಜೂನ್ ೪ರಂದು ಈ ದೇವಾಲಯದ ನಿರ್ಮಾಣಕಾರ್ಯವು ಪೂರ್ಣಗೊಂಡಿತೆಂದು ಮತ್ತು ಎರಡನೆಯ ಶಾಸನದಲ್ಲಿ ೧೮೭೯ರಲ್ಲಿ ದೇವಾಲಯದ ಬಾಗಿಲುಗಳಿಗೆ ಹಿತ್ತಾಳೆಯ ಕವಚವನ್ನು ಮಾಡಿಸಲಾಯಿತೆಂದು ಹೇಳಿದೆ. ಕನ್ನಿಕಾಪರಮೇಶ್ವರಿಯು ವೈಶ್ಯ ಜನಾಂಗದ ಕುಲ ದೇವತೆ. ೧೪ನೆಯ ಶಾಸನವು ಬಿದ್ದಂಡರ ಬೊಪ್ಪುವಿನ ಮಗ ಬಿ. ಸೋಮೈಯನ ಮರಣದ ಸಂಗತಿಯನ್ನು ತಿಳಿಸುತ್ತದೆ. ಈ ಬೊಪ್ಪುವಿನ ವಿಷಯ ಹಿಂದೆ ೧೩ನೆಯ ಶಾಸನದಲ್ಲಿ ಬಂದಿದೆ. ಬೊಪ್ಪುವು ದೊಡ್ಡ ವೀರರಾಜೇಂದ್ರನ ಕೈಕೆಳಗೆ ಸಿರ್‌ಕಾರೇಕಾರನಾಗಿದ್ದಂತೆಯೇ, ಅವನ ಮಗ ಸೋಮೈಯನು ಕೊಡಗಿನ ಅರಸರಲ್ಲಿ ಕೊನೆಯವನಾದ ಇಮ್ಮಡಿ ವೀರರಾಜೇಂದ್ರನ ಕೈಕೆಳಗೆ ಸಿರ್‌ಕಾರೇಕಾರ್ ಅಥವಾ ಸೇನಾಧಿಪತಿಯಾಗಿದ್ದನು. ಕ್ರಿ.ಶ. ೧೮೦೦ರಲ್ಲಿ ಜನಿಸಿದ ಈತನು ೧೮೭೯, ಆಗಸ್ಟ್ ೧೭ರಂದು ಮರಣ ಹೊಂದಿದನು. ಈ ಕಾಲದಲ್ಲಿ ಕೊಡಗು ಸೀಮೆಯು ಚೀಫ್ ಕಮಿಷನರರ ಅಧೀನಕ್ಕೊಳಪಟ್ಟಿದ್ದುದರಿಂದ, ರಾಜರ ಗದ್ದಿಗೆಗಳ ಆವರಣದಲ್ಲಿ ಅವನ ತಂದೆಯ ಸಮಾಧಿಯ ಪಕ್ಕದಲ್ಲೇ ಸೋಮೈಯನ ದೇಹವನ್ನೂ ಸಮಾಧಿಮಾಡಲು ಅವರ ಅನುಮತಿ ಪಡೆಯಲಾಯಿತು. ಈ ಶಾಸನವು ಇಂಗ್ಲೀಷ್ ಮತ್ತು ಕನ್ನಡಗಳೆರಡಲ್ಲಿಯೂ ಇರುವುದು ಗಮನಾರ್ಹ. ಈ ಕಾಲಕ್ಕೇ ಸೇರುವ ಮತ್ತು ಭಾಗಮಂಡಲದಲ್ಲಿರುವ ಇನ್ನೊಂದು ಶಾಸನವು ಮಲೆಯಾಳ ಭಾಷೆ ಹಾಗೂ ಲಿಪಿಗಳಲ್ಲಿವೆ. ಇದರ ಕಾಲ ಕ್ರಿ. ಶ. ೧೮೮೧. ಮಣವಟ್ಟ ಬೆಳ್ಳಿಯಪ್ಪನೆಂಬ ಭಕ್ತನೊಬ್ಬನು ಭಗಂಡೇಶ್ವರ ದೇವಾಲಯಕ್ಕೆ ಚಿನ್ನಪ್ಪನೆಂಬುವನ ಮೇಲ್ವಿಚಾರಣೆಯಲ್ಲಿ ತಯಾರಿಸಲಾದ ದೀಪಸ್ತಂಭವನ್ನು ಮಾಡಿಸಿಕೊಟ್ಟನೆಂದು ಇದರಲ್ಲಿ ಹೇಳಿದೆ.

ಕ್ರಿ.ಶ. ೨೦ನೆಯ ಶತಮಾನದ ಪೂರ್ವಾರ್ಧಕ್ಕೆ ಸೇರುವ ಕೆಲವು ಶಾಸನಗಳು ಕೊಡಗಿನಲ್ಲಿವೆ. ಆದರೆ, ಕ್ರಿ.ಶ. ೧೯೦೦ರ ವರೆಗಿನ ಶಾಸನಗಳಿಗೆ ನಮ್ಮ ವ್ಯಾಪ್ತಿಯನ್ನು ಸೀಮಿತಗೊಳಿಸಿರುವುದರಿಂದ, ಈ ಶಾಸನಗಳನ್ನು ಇಲ್ಲಿ ಸೇರಿಸಿಲ್ಲ. ಆದರೂ, ಇವುಗಳಲ್ಲಿ ಕೆಲವು ಗಮನಿಸಬೇಕಾದುವು. ಮಡಿಕೇರಿಯಲ್ಲಿ 'ರಾಜನ ಸೀತ'ದ ಬಳಿ ಇರುವ ನಿಲುಗಂಬದ ಬುಡದಲ್ಲಿ ಕೆತ್ತಿರುವ ಶಾಸನವೊಂದು ಕನ್ನಡ ಮತ್ತು ಇಂಗ್ಲಿಷ್‌ಗಳೆರಡರಲ್ಲಿಯೂ ಇದೆ. ಈ ಶಾಸನದಿಂದ ಇಂಡಿಯಾದ ವೈಸರಾಯ್ ಮತ್ತು ಗವರ್ನರ್ ಜನರಲ್ ಆದ ಲಾರ್ಡ ಇರ್ವಿನನು ಕೊಡಗಿನಲ್ಲಿ ವೈಸರಾಯರ ಮೊದಲ ಸಭೆಯನ್ನು ಈ ಸ್ಥಳದಲ್ಲಿ ನಡೆಸಿದನೆಂದು ತಿಳಿದುಬರುತ್ತದೆ. ಮಡಿಕೇರಿಯಲ್ಲಿ ಹಿಂದೆ ಚರ್ಚ್ ಆಗಿದ್ದು ಈಗ ಜಿಲ್ಲಾ ವಸ್ತುಸಂಗ್ರಹಾಲಯವಾಗಿರುವ ಕಟ್ಟಡದ ಗೋಡೆಗಳಿಗೆ ಸೇರಿಸಿರುವ ಸ್ಮಾರಕ ಫಲಕಗಳಲ್ಲಿ ಜೀವತೊರೆದ ಕೆಲವು ಸೈನ್ಯಾಧಿಕಾರಿಗಳ ಮತ್ತು ಇತರರ ಹೆಸರುಗಳಿವೆ. ಭಾಗಮಂಡಲದ ಭಗಂಡೇಶ್ವರ ದೇವಾಲಯದಲ್ಲಿರುವ ಐದು ಶಾಸನಗಳು ಈ ಶತಮಾನದ ಆದಿಭಾಗದಲ್ಲಿ ಯಾತ್ರಾರ್ಥಿಗಳಿಗಾಗಿ ನಿರ್ಮಿತವಾದ ಛತ್ರಗಳು ಹಾಗೂ ಅವುಗಳ ನಿರ್ವಹಣೆಗಾಗಿ ಕೆಲವು ಭಕ್ತಾದಿಗಳು ನೀಡಿದ ದತ್ತಿಗಳನ್ನು ತಿಳಿಸುತ್ತವೆ. ಇವುಗಳಲ್ಲಿ ಭಗಂಡೇಶ್ವರ ದೇವಾಲಯದ ನಂದಿಮಂಟಪದಲ್ಲಿರುವ ಶಾಸನದಿಂದ ಆ ನಂದಿಮಂಟಪವನ್ನು ಕೊಡಗಿನ ತಕ್ಕರಾದ ಬೆಳೆರ ಬೆಳ್ಯಪ್ಪನು ಕ್ರಿ. ಶ. ೧೯೧೫ರಲ್ಲಿ ಕಟ್ಟಿಸಿದನೆಂದು ತಿಳಿದುಬರುತ್ತದೆ.

## ಜೈನಧರ್ಮ

ಪ್ರಾಚೀನಕಾಲದಿಂದಲೂ ಈ ಜಿಲ್ಲೆಯಲ್ಲಿ ಜೈನಧರ್ಮ ವ್ಯಾಪಿಸಿತ್ತು. ಇಲ್ಲಿ ಈ ಮತದ ಹಲವಾರು ಕೇಂದ್ರಗಳಿವೆ. ನೆರೆಯ ಹಾಸನಜಿಲ್ಲೆಯ ಶ್ರವಣಬೆಳಗೊಳದಿಂದ ಜೈನಯತಿಗಳು ಈ ಕೇಂದ್ರಗಳಿಗೆ ಬಂದರೆಂಬುದೂ ಇಲ್ಲಿನ ಶಾಸನಗಳಿಂದ ಕಂಡುಬರುತ್ತದೆ.

ಈ ಸಂಪುಟದ ಮೊದಲನೆಯ ಶಾಸನವೇ ಗಂಗರ ಅವಿನೀತನು ತಲವನನಗರದ ಶ್ರೀ ವಿಜಯ ಜಿನಾಲಯಕ್ಕೆ ನೀಡಿದ ದತ್ತಿಯನ್ನು ಕುರಿತದ್ದಾಗಿದೆ. ಈ ದತ್ತಿಗಳನ್ನು ಪಡೆದವರು ದೇಸಿಗಗಣ, ಕೊಂಡಕುಂದಾನ್ವಯದ ಗುಣನಂದಿಭಟಾರರ ಶಿಷ್ಯರಾದ ಚಂದಣಂದಿ ಭಟಾರರು. ಆದರೆ ಈ ಶಾಸನದ ನೈಜತೆಯ ಬಗೆಗೇ ಸಂದೇಹವಿದೆ.

೯೮ನೆಯದು ಕ್ರಿ.ಶ. ೯೭೮ನೆಯ ವರ್ಷದ ಇನ್ನೊಂದು ಗಂಗರ ಶಾಸನ. ದಾನವನ್ನು ಪಡೆದಾತನು ಬೀರಸೇನ ಸಿದ್ಧಾಂತ ದೇವರ ಶಿಷ್ಯನಾದ ಗುಣಸೇನಪಂಡಿತಭಟ್ಟಾರಕರ ಶಿಷ್ಯನಾದ ಅನಂತವೀರ್ಯನು. ಮೇಲ್ಕಂಡ ಇಬ್ಬರೂ ಬೆಳ್ಗೊಳ–ಶ್ರವಣ ಬೆಳಗೊಳದ–ನಿವಾಸಿಗಳು. ಪೆಗ್ಗದೂರಿನ ಬಸದಿಗಾಗಿ ಆ ಗ್ರಾಮದ ಜೊತೆಗೆ ಪೊಸವಾದಗವೆಂಬ ಇನ್ನೊಂದು ಗ್ರಾಮವನ್ನು ಸಹ ದಾನಮಾಡಲಾಯಿತು. ಪೆಗ್ಗದೂರ ಬಸದಿಯ ಶಾಸನವೆಂದು ಅದರಲ್ಲಿ ಹೇಳಿದ್ದರೂ, ಈಗ ಅಲ್ಲಿ–ಈಗಿನ ಪೆಗ್ಗೂರಿನಲ್ಲಿ–ಯಾವ ಬಸದಿಯೂ ಇಲ್ಲ.

ಸೋಮವಾರಪೇಟೆ ತಾಲ್ಲೂಕಿನ ಮುಳ್ಳೂರು ಈ ಜಿಲ್ಲೆಯ ಜೈನರ ಕೇಂದ್ರಗಳಲ್ಲೊಂದು. ಕ್ರಿ.ಶ. ೧೦೫೦ರಲ್ಲಿ ಕೊಂಗಾಳ್ವರ ರಾಜಾಧಿರಾಜ ಕೊಂಗಾಳ್ವ (I)ನು ಇಲ್ಲಿ ಒಂದು ಬಸದಿಯನ್ನು ಕಟ್ಟಿಸಿದುದನ್ನು ಈ ಮೊದಲೇ ಅರಿತಿದ್ದೇವೆ. ಈ ಗ್ರಾಮದಲ್ಲಿ ಪಾರ್ಶ್ವನಾಥ, ಚಂದ್ರನಾಥ ಮತ್ತು ಶಾಂತೀಶ್ವರ ಎಂಬ ಹೆಸರಿನ ಮೂರು ಬಸದಿಗಳಿವೆ. ಮೊದಲನೆಯದಾದ ಪಾರ್ಶ್ವನಾಥ ಬಸದಿಯನ್ನು ಇಮ್ಮಡಿ ರಾಜೇಂದ್ರಚೋಳ ಕೊಂಗಾಳ್ವನ ಪತ್ನಿಯಾದ ಪೋಚಬ್ಬರಸಿ ಕಟ್ಟಿಸಿದಳು. ಇದನ್ನು ತಿಳಿಸುವ ಶಾಸನ ಆ ಬಸದಿಯ ಗೋಡೆಯ ಮೇಲಿದೆ. ಚಂದ್ರನಾಥ ಬಸದಿಯನ್ನು ಇಮ್ಮಡಿ ರಾಜಾಧಿರಾಜನು ತನ್ನ ತಾಯಿ ಪೋಚಬ್ಬರಸಿಯ ಪುಣ್ಯಾರ್ಥವಾಗಿ ಕಟ್ಟಿಸಿದನೆಂದು ೭೫ನೆಯ ಶಾಸನವನ್ನು ಅರ್ಥೈಸಬಹುದು. ಶಾಂತಿನಾಥ ಬಸದಿಯಲ್ಲಿನ ಶಾಂತಿನಾಥ ವಿಗ್ರಹದ ಪೀಠದ ಮೇಲಿನ ಶಾಸನದಲ್ಲಿ, ೧೨ ನೆಯ ಶತಮಾನದ ಮಧ್ಯಭಾಗದಲ್ಲಿ ಮಲ್ಲಿಷೇಣದೇವನು ಈ ಬಸದಿಯನ್ನು ಜೀರ್ಣೋದ್ಧಾರ ಮಾಡಿದನೆಂದು ಹೇಳಿರುವ ಕಾರಣ ಒಂದನೆಯ ರಾಜಾಧಿರಾಜನು ಕಟ್ಟಿಸಿದ ಬಸದಿ ಇದೇ ಆಗಿದೆ.

ಕೊಂಗಾಳ್ವ ಮನೆತನದ ಸಾಮಂತರ ಈ ಧರ್ಮಕಾರ್ಯಗಳಿಗೆ ಪ್ರೋತ್ಸಾಹ ನೀಡಿದವನು ಗುಣಸೇನಪಂಡಿತದೇವನು. ಈತನು ದ್ರವಿಳ ಅಥವಾ ತಿವುಳಿಗಣ, ನಂದಿಸಂಘ, ಅರುಂಗಳಾನ್ವಯಕ್ಕೆ ಸೇರಿದವನು. ಪುಷ್ಪಸೇನಸಿದ್ಧಾಂತದೇವನ ಶಿಷ್ಯನು. ಈ ಗುರುವಿನ ಪಾದಗಳನ್ನು ಶಾಂತೀಶ್ವರ ಬಸದಿಯ ಮುಂದಿನ ಬಂಡೆಯೊಂದರ ಮೇಲೆ ಕೆತ್ತಲಾಗಿದೆ. ಕ್ರಿ.ಶ. ೧೦೬೧ರಲ್ಲಿ ಈ ಬಸದಿಗಳು ಗುಣಸೇನಪಂಡಿತನ ಯಾಜಮಾನ್ಯಕ್ಕೆ ಸೇರಿದವು. ಈತನು 'ನಖರಗಳ ಧರ್ಮ'ವೆಂದು ಒಂದು ಭಾವಿಯನ್ನು ತೋಡಿಸಿದನು (ನಂ. ೭೯). ಈ ವಿಷಯವನ್ನು ಸೂಚಿಸುವ ಶಾಸನದ ಕೆಳಗೆ ಒಂದು ಹಾವಿನ ಚಿತ್ರವನ್ನು ಕೊರೆಯಲಾಗಿದೆ. ಹೊಯ್ಸಳರ ಅರಸನಾದ ವಿನಯಾದಿತ್ಯನಿಗೆ ಗುರುವಾಗಿದ್ದ ಗುಣಸೇನಪಂಡಿತನು ಸೊಸೆವೂರಿನಲ್ಲಿ ಕಟ್ಟಿದ ಬಸದಿಯ ಸಂರಕ್ಷಣೆಗೆಂದು ಪರಿಯಳದೇವಿಯಿಂದ ದತ್ತಿಯೊಂದನ್ನು ಪಡೆದನು. ಅರಕಲಗೂಡು ತಾಲೂಕಿನ ಶಾಸನದಲ್ಲಿ ಈತನನ್ನು ಹೊಯ್ಸಳ ಎಱೆಯಂಗನ ಪತ್ನಿಯಾದ ಏಚಲದೇವಿಯ ಗುರುವೆಂದು ಹೇಳಲಾಗಿದೆ. ಮುಳ್ಳೂರಿನಲ್ಲಿ ದೊಡ್ಡಬಂಡೆಯೊಂದರ ಮೇಲೆ ಈ ಗುಣಸೇನಪಂಡಿತನ ಪಾದಗಳನ್ನು ಕೆತ್ತಲಾಗಿದ್ದು (ನಂ. ೮೩) ಆ ಸ್ಥಳದಲ್ಲಿ ಈತನು ತಪವನ್ನು ಗೆಯ್ದು ಕೊನೆಯುಸಿರೆಳೆದನೆಂದು ಆ ಶಾಸನದಿಂದ ಊಹಿಸಬಹುದಾಗಿದೆ. ಈತನು ಕ್ರಿ.ಶ. ೧೦೬೪ರಲ್ಲಿ ಮೋಕ್ಷಲಕ್ಷ್ಮೀನಿವಾಸಕ್ಕೆ ಸಂದನೆಂದು (ಅಂದರೆ ಮಡಿದನೆಂದು) ೭೧ನೆಯ ಶಾಸನ ಹೇಳುತ್ತದೆ. ಶಾಸನದಲ್ಲಿ ಈತನನ್ನು ''ಪರಮಾರ್ಹನ್ತ್ಯಾದಿರತ್ನತ್ರಯ ಸಕಳಮಹಾಶಬ್ದಶಾಸ್ತ್ರಾಗಮಾದಿ ಸ್ಥಿರಷಟ್ತರ್ಕ್ಕಪ್ರವೀಣ''ನೆಂದು ವರ್ಣಿಸಿದೆ.

ಮುಳ್ಳೂರಿನ ಬಸದಿಗಳು ಚತುರಸ್ರಾಕಾರದಲ್ಲಿ, ಕಗ್ಗಲ್ಲಿನಲ್ಲಿ ಕಟ್ಟಲ್ಪಟ್ಟ ಸರಳವಾದ ಕಟ್ಟಡಗಳಾಗಿವೆ. ಆದರೆ ಈಗ ಲಭ್ಯವಿರುವ ಅವುಗಳಲ್ಲಿನ ವಿಗ್ರಹಗಳು ಸುಂದರ ಕಲಾಕೃತಿಗಳು. ಇವು ಕೊಂಗಾಳ್ವರ ಕಾಲದ ಶಿಲ್ಪಕಲಾನೈಪುಣ್ಯತೆಗೆ ಸಾಕ್ಷಿಗಳಾಗಿವೆ.

ಕೊಂಗಾಳ್ವರ ಆಳಿಕೆಯ ಕಾಲಕ್ಕೆ ಸೇರಿದ ಇನ್ನೂ ಕೆಲವು ಜೈನ ಶಾಸನಗಳು ಈ ಸಂಪುಟದಲ್ಲಿವೆ. ಶುಭಚಂದ್ರದೇವರ ಶಿಷ್ಯರಾದ ಪ್ರಭಾಚಂದ್ರದೇವರು ಮುಕ್ತರಾದ ವಿಷಯವನ್ನು ಕ್ರಿ.ಶ. ೧೦೪೪ನೆಯ ವರ್ಷದ ೮೯ನೆಯ ಶಾಸನ ತಿಳಿಸುತ್ತದೆ. ಪರಮಶ್ರಾವಕನಾದ ಎಡಯ್ಯನ ಪತ್ನಿ ಜಕ್ಕಿಯಬ್ಬೆಯು ಸನ್ಯಸನ ವಿಧಿಯಿಂದ ಮರಣಹೊಂದಿದಳೆಂದು ೧೦೦ನೆಯ ಶಾಸನವೂ, ಮದುವಂಗನಾಡ ದೊರೆಯಾದ ಕಿವಿರಿಯಯ್ಯನು ಚಾಂಗಳ ಬಸದಿಯಲ್ಲಿ ಹನ್ನೆರಡು ದಿನಗಳ ವ್ರತವನ್ನು ಆಚರಿಸಿ ಮುಡಿಪಿದನೆಂದು ೧೦೧ನೆಯ ಶಾಸನವೂ ತಿಳಿಸುತ್ತವೆ.

ಕೊಂಗಾಳ್ವರು ಜೈನಧರ್ಮಾವಲಂಬಿಗಳಾಗಿದ್ದರೂ, ಇತರ ಧರ್ಮಗಳಿಗೂ ಆಶ್ರಯ ನೀಡಿದ್ದರೆನ್ನುವುದು ಗಮನಾರ್ಹವಾಗಿದೆ. ೪೮ ಮತ್ತು ೮೯ನೆಯ ಶಾಸನಗಳಲ್ಲಿ ರಾಜೇಂದ್ರಪೃಥ್ವೀಕೊಂಗಾಳ್ವನು ಪೊಸವಳ್ಳಿಯ ಸಿದ್ಧೇಶ್ವರಾಲಯಕ್ಕೆ ದತ್ತಿಗಳನ್ನು ನೀಡಿದ ಉಲ್ಲೇಖವಿರುವುದನ್ನು ಇಲ್ಲಿ ಸ್ಮರಿಸಬಹುದು.

ಮಡಿಕೇರಿಯ ವಸ್ತುಸಂಗ್ರಹಾಲಯದಲ್ಲಿ ಮೂರು ಜೈನವಿಗ್ರಹಗಳನ್ನು ಇಡಲಾಗಿದೆ. ಅವುಗಳ ಪೀಠದಲ್ಲಿ ೧೨ನೆಯ ಶತಮಾನಕ್ಕೆ ಸೇರಿದ ಶಾಸನ (೪, ೫, ೬)ಗಳಿದ್ದು ಅವುಗಳಲ್ಲಿ ಎರಡು ಶಾಂತಿನಾಥನ ವಿಗ್ರಹಗಳಾಗಿವೆ. ವಸ್ತುಸಂಗ್ರಹಾಲಯಕ್ಕೆ ಒಯ್ಯುವ ಪೂರ್ವದಲ್ಲಿ ಅವು ಅಂಜನಗಿರಿಯ ಬಸದಿಯಲ್ಲಿದ್ದುವು. ಈ ಬಸದಿ, ಈಗಿರುವಂತೆ ಕಟ್ಟಿದುದು ಕ್ರಿ.ಶ. ೧೫೪೪ರಲ್ಲಿ ಎಂದು ೧೯ನೆಯ ಶಾಸನದಿಂದ ತಿಳಿಯುತ್ತದೆ. ಅಭಿನವಚಾರುಕೀರ್ತಿಪಂಡಿತದೇವನಿಗೆ ಶಾಂತಿತೀರ್ಥೇಶ್ವರ ಮತ್ತು ಅನಂತನಾಥ

ಸ್ವಾಮಿಯ ವಿಗ್ರಹಗಳು ಸುವರ್ಣಾವತಿ ನದಿಯಲ್ಲಿ ಕ್ರಿ.ಶ. ೧೫೩೧–೩೨ರಲ್ಲಿ ದೊರೆತವೆಂದೂ, ಅವುಗಳನ್ನು ಅಂಜನಗಿರಿಯಲ್ಲಿ ಮೊದಲು ಮರದಲ್ಲಿ ಕಟ್ಟಲಾದ ಬಸದಿಯಲ್ಲಿ ಪ್ರತಿಷ್ಠಾಪಿಸಲಾಯಿತೆಂದೂ, ನಂತರ, ಕ್ರಿ.ಶ. ೧೫೪೪ರಲ್ಲಿ ಈ ಬಸದಿಯನ್ನು ಶಾಂತಿಕೀರ್ತಿದೇವರ ಆಣತಿಯಂತೆ ಕಲ್ಲಿನಲ್ಲಿ ಕಟ್ಟಿಸಲಾಯಿತೆಂದೂ ಈ ಶಾಸನದಲ್ಲಿ ಹೇಳಿದೆ. ಶಾಂತಿಕೀರ್ತ್ತಿದೇವರ ಸ್ವಾನುಜರಾದ ಕೋಣಸನಗರದ ಶಾಂತೋಪಾಧ್ಯಾಯರು ಇವುಗಳನ್ನು ಪ್ರತಿಷ್ಠಾಪಿಸಿದರು.

ಈಗ ಮಡಿಕೇರಿಯಲ್ಲಿರುವ ಈ ವಿಗ್ರಹಗಳು ಮೊದಲು ತಾತಂಗಿಯಲ್ಲಿ ಪ್ರತಿಷ್ಠಾಪಿತವಾದವುಗಳೆಂಬುದು ಸ್ಪಷ್ಟ. ೪ನೆಯ ಶಾಸನದಲ್ಲಿ ಮೂಲಸಂಘ, ದೇಸಿಯಗಣ, ಪುಸ್ತಕಗಚ್ಛ, ಕೊಂಡಕುಂದಾನ್ವಯಕ್ಕೆ ಸೇರಿದ ತಾತಂಗಿಯ ಮಾಘಣಂದಿ ಭಟ್ಟಾರಕರು ಶಾಂತಿನಾಥನ ವಿಗ್ರಹವನ್ನು ಸ್ಥಾಪಿಸಿದರೆಂದು ಹೇಳಿದೆ. ಶಾಂತಿನಾಥನ ಇನ್ನೊಂದು ವಿಗ್ರಹವನ್ನು ಹೆರಗಿನ ಹರಿಶ್ಚಂದ್ರದೇವನ ಶಿಷ್ಯರಾದ ತಾತಂಗಿಯ ಪಟ್ಟಣದ ನಖರಗಳು ಪ್ರತಿಷ್ಠಾಪಿಸಿದರು (ನಂ. ೬). ಎಂದ ಬಳಿಕ ೭ನೆಯ ಶಾಸನದಲ್ಲಿ ಹೇಳಲಾದ, ನಯಕೀರ್ತ್ತಿಸಿದ್ಧಾಂತ ಚಕ್ರವರ್ತ್ತಿಗಳ ಗುಡ್ಡ ಅಶ್ವಾಧ್ಯಕ್ಷ ಹರಿಯಣ್ಣ ಹೆಗ್ಗಡೆ ಮಾಡಿಸಿಕೊಟ್ಟ ದೇವರು ಅನಂತಸ್ವಾಮಿಯ ವಿಗ್ರಹವೆಂಬುದು ಸ್ಪಷ್ಟವಾಗುತ್ತದೆ. ತಾತಂಗಿಯು, ಅಂಜನಗಿರಿಯ ಉತ್ತರಕ್ಕೆ ಐದು ಕಿಲೋಮೀಟರುಗಳ ದೂರದಲ್ಲಿ ಸುವರ್ಣಾವತಿ, ಅಂದರೆ ಹಾರಂಗಿ ನದಿಯ ತೀರದ ಮೇಲಿನ ಒಂದು ಗ್ರಾಮವಾಗಿದ್ದಿರಬೇಕು. ನದಿಯಲ್ಲಿ ಬಂದ ಪ್ರವಾಹಗಳಲ್ಲೊಂದು ಅಲ್ಲಿನ ಬಸದಿಯ ಕಟ್ಟಡವನ್ನು ನಾಶಪಡಿಸಿ, ಅದರೊಳಗಿದ್ದ ವಿಗ್ರಹಗಳು ಶತಮಾನಗಳ ಬಳಿಕ ಅಭಿನವಚಾರುಕೀರ್ತ್ತಿಗೆ ದೊರೆತಿರಬಹುದೆಂದು ತೋರುತ್ತದೆ.

೧೯ನೆಯ ಶಾಸನದಲ್ಲಿ ಬೆಳಗುಳಕ್ಕೆ ಸೇರಿದ ಜೈನಮುನಿಗಳ ವಂಶಾವಳಿಯನ್ನು ಕೊಟ್ಟಿದೆ. ಅದು ಹೀಗಿದೆ :




ಇವರಲ್ಲಿ ಮೊದಲನೆಯವನಿಗೆ ರಾಯರಾಜಗುರು, ಮಂಡಲಾಚಾರ್ಯ್ಯ, ಮಹಾವಾದವಾದೀಶ್ವರ ಮುಂತಾದ ಬಿರುದುಗಳಿವೆ. ಅಲ್ಲದೆ ಈತನನ್ನು ಬಲ್ಲಾಳರಾಯ ಜೀವರಕ್ಷಾಪಾಲಕನೆಂದೂ ವರ್ಣಿಸಿದೆ. ಇದರಿಂದ ಈತನು ಹೊಯ್ಸಳರ ರಾಜಗುರುವಾಗಿದ್ದು, ಬಲ್ಲಾಳರಾಯನೊಬ್ಬನ ಜೀವವನ್ನು ಕಾಪಾಡಿದನೆಂದು ತಿಳಿದುಬರುತ್ತದೆ. ಆದರೆ ಈ ಬಲ್ಲಾಳರಾಯನು ಯಾರು ಎಂಬುದು ಸ್ಪಷ್ಟವಾಗಿಲ್ಲ. ಈತನು ಮೊದಲನೆಯ ಬಲ್ಲಾಳನೆಂಬ ಒಂದು ಸಂಪ್ರದಾಯ ಮಾತ್ರ ಪ್ರಚಲಿತವಾಗಿದೆ.

## ಅನಿರ್ದಿಷ್ಟ ವಿಷಯಗಳು

ಹತ್ತನೆಯ ಶತಮಾನದ ಎರಡು ವೀರಗಲ್ಲುಗಳು (ನಂ. ೩೭ ಮತ್ತು ೫೬) ಇಬ್ಬರು ದೇಹವನ್ನು ಬಲಿದಾನಮಾಡಿದ ವಿಷಯವನ್ನು ನಿರೂಪಿಸುತ್ತವೆ. ಎರಡು ಸಂದರ್ಭಗಳಲ್ಲಿಯೂ ಅವರು ತಮ್ಮ ತಲೆಯನ್ನು ಕಡಿದುಕೊಳ್ಳುವುದರ ಮೂಲಕ ದೇಹತ್ಯಾಗಮಾಡಿಕೊಂಡರು. ಶಿಥಿಲವಾದ ಈ ಶಾಸನಗಳಲ್ಲಿ ಹೆಚ್ಚಿನ ವಿವರಗಳು ಸಿಗುವುದಿಲ್ಲ. ಮೊದಲನೆಯ ಶಾಸನದ ಕಾಲ ಕ್ರಿ. ಶ. ೯೪೪. ಮಡಿದ ವೀರನ ಹೆಸರು ಬೂಚಗ ಎಂದಿದ್ದಂತೆ ಕಾಣುತ್ತದೆ. ಎರಡನೆಯ ಶಾಸನ ರಣಿವೊಳಿಗನ ತಮ್ಮನಾದ ಲಲ್ಲುಗನಿಗೆ ಸಂಬಂಧಿಸಿದುದಾಗಿದೆ.

ಕ್ರಿ. ಶ. ೧೦೭೦ನೆಯ ವರ್ಷದ ೪೯ನೆಯ ಶಾಸನ ಸಿದ್ಧೇಶ್ವರ ಮಹಾದೇವನಿಗೆ ನೀಡಿದ ದತ್ತಿಯನ್ನು ಕುರಿತಾಗಿದೆ. ದಾನಭೂಮಿಯನ್ನು ಅದಕ್ಕಾಗಿ ಪೊಸವಳ್ಳಿಯ ನೀರಗಾವುಂಡನಿಂದ ಕ್ರಯಕ್ಕೆ ಪಡೆಯಲಾಯಿತು. ಶಾಸನದಲ್ಲಿ ಈ ವಿಷಯವನ್ನು ನಿರೂಪಿಸುವಾಗ ಉಪಯೋಗಿಸಲಾದ "ಪೊನ್ನಱಿ ಕೊಟ್ಟು ಮಣ್ಣಱಿ ಕೊಣ್ಡು ಪತ್ತು ಖಣ್ಡುವೆಯ ಆಡವಲಂ" ಎಂಬ ಪದಗುಚ್ಛದಲ್ಲಿನ 'ಆಡವಲಂ' ಎಂಬ ಪದದ ಖಚಿತವಾದ ಅರ್ಥ ತಿಳಿಯದು. ವರ್ಷದ ೪೮ನೆಯ ಶಾಸನದಲ್ಲಿ 'ಆಡವಲಂ ಗದ್ಯಾಣ'ವೆಂಬ ಮಾತೂ ಇದೆ.

ಗಣಗೂರು ಮತ್ತು ಚೌಡ್ಲು ಗ್ರಾಮಗಳಲ್ಲಿನ ೧೩ನೆಯ ಶತಮಾನದ ಶಾಸನಗಳಲ್ಲಿ (ನಂ. ೫೨ ಮತ್ತು ೬೦) ಆಸ್ತಿಯ ಮೇಲಿನ ಹಕ್ಕಿಗೆ ಸಂಬಂಧಿಸಿದಂತೆ ನಿಯಮಗಳ ಉಲ್ಲೇಖವಿದೆ. ಗಣಗೂರು ಶಾಸನದಲ್ಲಿ ಗಂಡುಮಕ್ಕಳಿಲ್ಲದಿದ್ದಾಗ 'ಹೆಂಣ್ಣಿಂಗೆ ಹೆಣ್ಣುಮಕ್ಕಳಿಂಗೆ' ಆಸ್ತಿಯಲ್ಲಿ ಪಾಲು ಸಲುತ್ತದೆ ಎಂಬ ನಿಯಮವನ್ನು ಹೇಳಿದೆ. ಈ ನಿಯಮ ಬಹುಶಃ ಗುಂದನಾಡಿಗೆ ಅನ್ವಯವಾಗುವಂತೆ ಹೇಳಿದೆ. ೬೦ನೆಯ ಶಾಸನ ಹಿಂದೆ ಕುಂದೂರಿನಲ್ಲಿ ಹೆಣ್ಣಿಗೆ ಸಲುವ ಸ್ವಾಸ್ತೆಮಾರಿಯಾದೆಯನ್ನು

ದೃಢಪಡಿಸುವುದಲ್ಲದೆ "ಹೆಂಣ್ಣಿಂಗೆ ಹೆಣ್ಣುಮಕ್ಕಳಿಂಗೆ ತೊತ್ತಿನ ಮಕಳಿಂಗೆ" ಸಹ ಆಸ್ತಿಯಲ್ಲಿ ಪಾಲು ಸಲ್ಲುವುದು ಎಂದು ಹೇಳುತ್ತದೆ.

ಸುಮಾರು ೧೪೯೮ನೆಯ ವರ್ಷದ ಶಾಸನ (ನಂ. ೪೪) ಹಾನಗಲ ಸಿಂಗೇಗೌಡನಿಗೆ ನಂಜರಪ್ಪಯಣ್ಣನು ನೀಡಿದ ಗೌಡಿಕೆಗೆ ಸಂಬಂಧಿಸಿದುದಾಗಿದೆ. ಹಾನಗಲ ಎಂಬುದು ಧಾರವಾಡ ಜಿಲ್ಲೆಯ ಹಾನಗಲ್ಲು ಆಗಿರಬಹುದಾದ ಪಕ್ಷದಲ್ಲಿ, ದಾನಪಡೆದಾತ, ಅಥವಾ ಅವನ ಪೂರ್ವಜರು ದೂರದ ಆ ಊರಿನಿಂದ ಇಲ್ಲಿಗೆ ವಲಸೆ ಬಂದಿದ್ದರೆನ್ನುವುದು ಗಮನಾರ್ಹ.

೧೯ನೆಯ ಶತಮಾನಕ್ಕೆ ಸೇರಿದ ದೇವಸ್ಥಾನದ ಗಂಟೆಯ ಮೇಲಿರುವ ಶಾಸನ (ನಂ. ೩೫) ಮೊಣ್ಣಪ್ಪನವರ ಪತ್ನಿ ಮುದ್ದಮ್ಮನ ಜ್ಞಾಪಕಾರ್ಥವಾಗಿ ನೀಡಿದುದು. ಇದರಲ್ಲಿ ಮೊಂಣಪ್ಪನನ್ನು ಮನೆಯ ಪಂಡ ಎನ್ನಲಾಗಿದೆ. ಇದು ಅವನ ಮನೆಯ ಹೆಸರು.

ಈ ಸಂಪುಟದಲ್ಲಿ ಬರುವ ಕೆಲವು ನಾಡುಗಳು—ಪೂನಾಡು-೬೦೦೦, ಎಡೆನಾಡು-೭೦, ಮುಳ್ಳೂರುನಾಡು, ಉಲುಗಲ್ಲಿ ಮೂಡಗೇರಿನಾಡು, ಹೊರೂರು ನೊರೊಕ್ಕಲುನಾಡು, ಕಾರತ್ತುಮೂರ್ನಾಡು, ಬೆಟ್ಟಿಯತ್ತುನಾಡು, ಪಾಡಿನಾಲ್ಕುನಾಡು, ಯಡವನಾಡು, ಗುಂದನಾಡು, ತೆಂಕನಾಡು(೭೦), ಸಂಹಥನಾಡು—ಐತಿಹಾಸಿಕ ಭೂಗೋಳವನ್ನು ಅಧ್ಯಯನ ಮಾಡುವವರು ಗಮನಿಸತಕ್ಕಂಥವುಗಳಾಗಿವೆ. ಇವುಗಳಲ್ಲಿ ಕೆಲವು ನಾಡುಗಳ ಹೆಸರುಗಳು ಈಗಲೂ ಅಸ್ತಿತ್ವದಲ್ಲಿವೆ.

## 1 (1)*

### ಮಡಿಕೇರಿ, ಮಡಿಕೇರಿ ತಾಲ್ಲೂಕು

ಜಿಲ್ಲಾ ಖಜಾನೆಯಲ್ಲಿದ್ದು ಈಗ ಸ್ವಿಡ್ಜರ್ಲೆಂಡಿನ ಬ್ಯಾಸೆಲ್‌ನಲ್ಲಿರುವ ಲ್ಯುಥೇರನ್
ವಸ್ತುಸಂಗ್ರಹಾಲಯದಲ್ಲಿರುವ ತಾಮ್ರಶಾಸನ

The record is on three copper plates secured with a ring and elephant seal. It is in Kannada characters of the 9th century. The language of the main portion is Sanskrit and the details of the grant are in Kannada.

The record gives the genealogy of the Gaṅgas upto Avinīta. The details about each king namely, Koṅguṇi-mahādhirāja, Mādhava-mahādhirāja, Harivarma-mahādhirāja, Vishṇugōpa-mahādhirāja, Mādhava-Mahādhirāja and Avinīta agree with most of the copper plate records of the Gaṅgas hitherto discovered.

The details of the date of the record are the year 388, Māgha, Sōmavāra, Svāti-nakshatra, śu. pañchami. It is not clear if the year 388 refers to the Śaka year. No cyclic year is mentioned in the record. However, if this is taken as the Śaka year, the given date would correspond to 466 A.D. But the details regarding the week day and the *nakshatra* do not correspond, since Māgha śu. 5 in Śaka 388 fell on Wednesday and not on Monday and the *nakshatra* was Uttarābhādrapada and not Svāti.

The record registers the grant of Badaṇeguppe and other villages to Śrīvijaya-jinālaya of Taḷavana-nagara. The donee was Chandaṇandi-bhaṭāra, disciple of Guṇanandi-bhaṭāra, who belonged to the Dēsiga-gaṇa and Koṇḍakundānvaya. The villages are stated to have been granted by the minister of Akālavarsha Pṛithvīvallabha having obtained them by grant from Avinīta-mahādhirāja.

ಒಂದನೆಯ ಹಲಗೆಯ ಹಿಂಭಾಗ:

1 ಸ್ವಸ್ತಿ ಜಿತಾಮ್ಭಗವತಾ ಗತ ಘನ ಗಗನಾಭೇನ ಪದ್ಮಾನಾಭೇನ ಶ್ರೀಮದ್ಜಾಹ್ನಾವೀಯ [ಕು]
2 ಲಾಮಲಾವ್ಯೋಮಾವ ಭಸನ ಭಾಸ್ಕರಃ ಸ್ವಖಡ್ಗಯ್ಕ ಪ್ರಹರ ಖಣ್ಡಿತ ಮಹಾಸಿಲಾಸ್ತಮ್ಭ ಲಬ್ಧ ಬಲ
3 ಪರಾಕ್ರಮೋ ದಾರಣೋರಿಗಣ ವಿದಾರಣೋಪಲಬ್ಧ ಬ್ರಣ ವಿಭೂಷಣ ವಿಭೂಷಿತ ಕಣ್ವಾಯನ
4 ಸ ಗೋತ್ರಸ್ಯ ಶ್ರೀಮಾನ್ಕೊಙ್ಗಣಿ ಮಹಾಧಿರಾಜ || ತತ್ಪುತ್ರ ಪಿತುರನ್ವಾಗತ ಗುಣಯುಕ್ತೋ ವಿ
5 ದ್ಯಾ ವಿನೆಯ ವಿಹಿತ ವೃತ್ತಃ ಸಮ್ಯಾಕ್ಪ್ರಜಾ ಪಳನಾ ಮಾತ್ರಾಧಿಗತ ರಾಜ್ಯಾತ್ಪ್ರಯೋಜನ ವಿದ್ವತ್ಕ
6 ವಿ ಕಾಞ್ಚನ ನಿಕಾಷೋಪಲಭೂತೋ ನೀತಿಸಾಸ್ತ್ರಸ್ಯ ವಕ್ತ್ರಿ ಪಯೋಕ್ತ್ರಿ ಕುಸಲಸ್ಯ ದತ್ತಕಸೂತ್ರ
7 ವೃತ್ತಿಪ್ರಣೇತಾಂ ಶ್ರೀಮಾನ್ಮಾಧವ ಮಹಾಧಿರಾಜ || ತತ್ಪುತ್ರ ಪಿತೃಪೈತಮಹಾ ಗುಣಯುಕ್ತೋವನೇಕ
8 ಚಾತುರ್ದ್ದನ್ತ ಯುದ್ಧವಾಪ್ತಿ ಚತುರುದಧಿ ಸಲಿಲ ಸ್ವದಿತ ಯಸ ಶ್ರೀಮದ್ಧರಿವರ್ಮ್ಮ ಮಹಾಧಿರಾಜ || ತ
9 ತ್ಪುತ್ರ || ದ್ವಿಜ ಗುರು ದೇವತಾಪ್ಪೂಜನ ಪರೋ ನಾರಯಣ ಚರಣನೂದ್ಧತ ಶ್ರೀಮದ್ವಿಷ್ಣುಗೋಪ ಮ

ಎರಡನೆಯ ಹಲಗೆಯ ಮುಂಭಾಗ:

10 ಹಾಧಿರಾಜ || ತಸ್ಯ ಪುತ್ರ || ತ್ರಯಮ್ಬಕ ಚರಣಾಭೋರುಹ ರಾಜಾಪ್ಪವಿತ್ರ್ಯಕೃತೋತ್ತಮಾಙ್ಗ ಸ್ವಭುಜ

* ಆವರಣದಲ್ಲಿರುವ ಅಂಕೆಗಳು ಹಿಂದಿನ ಆವೃತ್ತಿಯಲ್ಲಿನ ಶಾಸನಗಳ ಅಂಕೆಗಳನ್ನು ಸೂಚಿಸುತ್ತವೆ.

11 ಬಳ ಪರಾಕ್ರಮ ಕ್ರಯ ಕೃತ ರಾಜ್ಯ ಕಲಿಯುಗ ಬಳ ಪಂಕಾವಸನ್ನ ಧೃಷೋದ್ಧರಣ ನಿತ್ಯ ಸನ್ನ[1]ದ್ದ ಶ್ರೀಮಾನ್ಮಾಥ

12 ಧ ಮಹಾಧಿರಾಜ ‖ ತಸ್ಯ ಪುತ್ರ ‖ ಶ್ರೀಮದ್ಕದಂಬ ಕುಲ ಗಗನ ಗಭಸ್ತಿಮಾಲಿನ ಕ್ರಿಷ್ಣಧರ್ಮ್ಮ ಮ

13 ಹಾಧಿರಾಜಸ್ಯ ಪ್ರಿಯಾಭಾಗಿನೇಯೋ ವಿದ್ಯಾ[2]ವಿನೆಯತಿಸಯ ಪರಿಪೂರಿತಾನ್ತ್ರತ್ನ ನಿರವಗ್ರಹ ಪ್ರಥಾನ ಸೌ

14 ರ್ಯ್ಯ ವಿದ್ವಸುಪ್ರಥಮ ಗಣ್ಣ್ಯ ಶ್ರೀಮಾನ್ಕೊಙ್ಗಣಿ ಮಹಾಧಿರಾಜ ಅವಿನೀತ ನಾಮಧೇಯ ದತ್ತಸ್ಯ

15 ದೇಸಿಗಗಣಂ ಕೊಣ್ಡಕುನ್ದಾನ್ವಯ ಗುಣಚನ್ದ್ರ ಭಟಾರ ಸಿಷ್ಯಸ್ಯ ಅಭಣನ್ದಿ ಭಟಾರ ತಸ್ಯ ಸಿಷ್ಯಸ್ಯ

16 ಸೀಳಭದ್ರ ಭಟಾರ ಸಿಷ್ಯಸ್ಯ ಜಯಣನ್ದಿ ಭಟಾರ ಸಿಷ್ಯಸ್ಯ ಗುಣಣ[1]ನ್ದಿ ಭಟಾರ ಸಿಷ್ಯಸ್ಯ ಚನ್ದಣನ್ದಿ ಭಟಾರರ್ಗ್ಗೆ ಅಷ್ಟಾ ಅ

17 ಸೀತಿ ಉತ್ತರಸ್ಯ ತ್ರಯೋಸ[1]ತಸ್ಯ ಸಂವತ್ಸರಸ್ಯ ಮಾಘ ಮಾಸಂ ಶೋಮವಾರಂ ಸ್ವತಿ ನಕ್ಷತ್ರ ಸುದ್ಧ ಪಞ್ಚಮಿ ಅಕಾಳ

18 ವರ್ಷ ಪೃಥುವೀವಲ್ಲಭ ಮನ್ತ್ರಿ ತಳವನ ನಗರ ಶ್ರೀವಿಜಯ ಜಿನಾಲಯ[1]ಕ್ಕೆ ಪೂನಾಡು ಛಾಸಹಸ್ರ ಎಡೆನಾಡು ಸ

19 ಪ್ತರಿ ಮಧ್ಯೆ ಬದಣೆಗುಪ್ಪೆ ನಾಮ ಅವಿನೀತ ಮಹಾಧಿರಾಜೇನ ದತ್ತೇನ ಪಡಿಯೇಱಬಿಱೊಳಂ ಊರೂ

**ಎರಡನೆಯ ಹಲಗೆಯ ಹಿಂಭಾಗ:**

20 ರೊಳ್ಪನ್ನಿ ಕ್ಕರ್ಣ್ಣುಡ್ಗಗಙ್ಗಿಯ್ದು ಅಪ್ಬಲಿಮಣ್ಣಂ ತಳವನಪುರದೊಳ್ತವಿತ್ತಿಯ ಮಣ್ಪೊಗರಿಗೆಱೆಯೊಳ್ಪ

21 ನ್ನಿಕ್ಕರ್ಣ್ಣುಡ್ಗಂ ಪಿರಿಕೆಱೆಯೊಳಂ ರಾಜಮಾನಂ ಅನುಮೋದನ ಪನ್ನಿಕ್ಕರ್ಣ್ಣುಡ್ಗಂ ಮನೋಹರಂ ದತ್ತಂ ಬದಣೆಗುಪ್ಪೆ

22 ಗ್ರಾಮಸ್ಯ ಸೀಮಾನ್ತರಂ ಪೂರ್ಬ್ಬಸ್ಯಂ ದಿಸಿ ಕೆಂಜಿಗೆ ಮೊಱಡಿಎ ಗಜಸೆಲೆಯೆ ಕರಿವಳ್ಳಿಯ ಕೊಟ್ಟಗರ ಬ

23 ದಣೆಗುಪ್ಪೆಯ ತ್ರಿಸನ್ಧಿಯ ಸತ್ತಿಕೊಱಡು ಆಗ್ನೇಯದಿ ನನ್ತೆಬನ್ದು ಕಾಗಣಿ ತಟಾಕಂ ಪುನ ದಕ್ಷಿಣಸ್ಯ

24 ದಿಸಿ ಬಹುಶ್ನುಹಿಯೆ ಬಲ್ಕಣಿ ವೃಕ್ಷಮೆ ಪುನ ಪಶ್ಚಿಮ ಮುಖದೆ ಸನ್ದ ಬಹುಮೂಲಿಕ ಪನ್ತಿಯೆ ಪುನ ಬ

25 ದಣೆಗುಪ್ಪೆಯ ಕೊಟ್ಟಗರ ಮುಟ್ಟಿಗಿಯ ತ್ರಿಸನ್ಧಿಯ ಕೋಟೆ ವಣ್ಡಿಗಾಲೆ ಪುನ ನೈರತ್ಯದೆ ಸನ್ದು ಕಥಕ ವೃಕ್ಷ

26 ಮೆ ಪುನ ಪಶ್ಚಿಮಸ್ಯಾಂ ದಿಸಿ ಪೆಟ್ಟುಟ್ಟಿಲ್ವೃಕ್ಷಮೆ ಸಾನ್ತೆರೆತಿಯ ವಟಾವೃಕ್ಷಮೆ ಪುನ ತೊರೆವಳ್ಳಮೆ ಉತ್ತರಾಮುಖ

27 ದೆ ಸನ್ದ ಬಹುಮೂಲಿಕ ಪನ್ತಿಯೆ ಜಮ್ಬುಪಡಿಯ ತಟಾಕಮೆ ಪುನ ವಾಯವ್ಯದೆ ಗಱೆಚಿಂಚ ವೃಕ್ಷಮೆ ಪುನ ಬದಣೆ

28 ಗುಪ್ಪೆಯ ಮುಟ್ಟಿಗಿಯ ಕೊಳೆಯನೂರ ಧಾಸನೂರ ತ್ರಿಸನ್ಧಿಯ ನೆಗ್ಗಿಲ ಗುಂಬೆ ನಿಡುಮೆಳುಙ್ಗೆ ಪುನ ಗಜಸೆಲೆ

29 ಯ ಗ್ರಾಮ ಉತ್ತರ ದಿಸಿ ಕಾಯ್ಗುಮೊಱಡಿಎ ಇಟಿದು ಕೆಂಬರೆಯೆ ಪುನ ಪೂರ್ಬ್ಬಮುಖದೆ ಸನ್ದ ಬಹುಮೂಲಿಕ ಪ

**ಮೂರನೆಯ ಹಲಗೆಯ ಮುಂಭಾಗ:**

30 ನ್ತಿಯೆ ಪುನ ಕಡಪಟ್ಟಿಗಾಲ ವಟವೃಕ್ಷಮೆ ಪುನ ಇಸಾನದೆ ಬದಣೆಗುಪ್ಪೆಯ ದಾಸನೂರ ಪೊಟ್ರಿದ ತ್ರಿಸನ್ಧಿಯ

31 ತಟಾಕಮೆ ಕೊಡಿಗಟ್ಟೆ ಚಿಞ್ಚಾವೃಕ್ಷಮೆ ಕೆಂತ[1]ಱಪ್ಪಿನ ದಿಣೆಇಂ ಪೂರ್ಬ್ಬದೆ ಕೂಡಿತ್ತು ಸೀಮಾನ್ತರಂ ‖ ತಸ್ಯ ಸಾಕ್ಷಿಣ

32 ಗಙ್ಗರಾಜಕುಲ ಸಕಲಾಸ್ಥಯಿಕ ಪುರುಷ ಪೆರ್ಬ್ಬಕ್ಕವಾಣ ಮಱುಗರೆಯ ಸೇನ್ದ್ರಕ ಗಂಜೆನಾಡ ನಿರ್ಗ್ಗುನ್ದ ಮಣಿಯು

33 ಗುರೆಯ ನನ್ದ್ಯಾಲ ಸೀಂಬಾಲಾದಪಭೃತ್ಯಯಾಂ ‖ ದೇಸ ಸಾಕ್ಷಿ ತಗಡೂರ ಕುಱುಗೋವರು ಗಣಿಗನೂರ ತಗಡರು ಆಲ್ಗೋ

34 ಡ ತೇನನ್ದಕರುಂ ಉಮ್ಮತ್ತೂರ ಬೆಳ್ಳುರರುಂ ಆಳಗೆಯರುಂ ಬದಣೆಗುಪ್ಪೆಯ ಝುಂಸನ್ದ[3] ಬೆಳ್ಳುರರು ಪೆರ್ಗ್ಗಿವಿಯರುಂ ‖

---

[1] ಈ ಅಕ್ಷರವನ್ನು ಪಂಕ್ತಿಯ ಕೆಳಗೆ ಸೇರಿಸಲಾಗಿದೆ.

[2] ವಿದ್ಯಾ ಎಂಬ ಪದವನ್ನು, ಮೇಲೆ ಹಂಸಪಾದ ಹಾಕಿ ಪಂಕ್ತಿಯ ಕೆಳಗೆ ಬರೆದಿದೆ.

[3] ಝುಂಸನ್ದ ಎಂಬ ಪದವನ್ನು, ಮೇಲೆ ಹಂಸಪಾದ ಹಾಕಿ ಪಂಕ್ತಿಯ ಕೆಳಗೆ ಬರೆದಿದೆ.

35 ಸ್ವದತ್ತ ಪರದತ್ತಾಂ ಗ್ವಾ ಯೋ ಹರೇಥ ವಸುನ್ಧರೀ ಷಷ್ಟಿಂ ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯ[1]ತೇ
ಕೃಮಿ || ವ

36 ಸುಭಿ ವಸುಧಾ ಭುಕ್ತಂ ರಾಜಭಿ ಸ್ಸಕರಾಜಭಿ ಯಸ್ಯ ಯಸ್ಯ ಯದಾ ಭೂಮಿ ತಸ್ಯ ತಸ್ಯ ತದಾ ಪಳಂ || ದೇವ

37 ಸ್ವಸ್ತು ವಿಷಂ ಘೋರಂ ನ ವಿಷಂ ವಿಷಮುಚ್ಯತೇ ವಿಷಮೇಕಾಕಿನಂ ಹೊನ್ತಿ ದೇವಸ್ವ ಪುತ್ರಪೌತ್ರಿಕಂ ||
ಸಾಮಾನೋಯಂ ಧ

38 ರ್ಮ್ಮಹೇತುಂ ನೃಪಾಣಾಂ ಕಾಲೇ ಕಾಲೇ ಪಾಲನೀಯೋ ಭವದ್ಭಿ ಸರ್ಬ್ಬಾನೇತಾಂ ಭಾಗಿನ ಪಾರ್ತ್ಥಿವೇನ್ದ್ರಾ
ಭೂಯೋ ಭೂಯೋ

39 ಯಾಚತೇ ರಾಮಭದ್ರಾ || ವಿಸ್ವಕರ್ಮ್ಮ ಲಿಖಿತಂ ||

## TRANSLITERATION

*First plate, back* :

1 svasti jitām bhagavatā gata-ghana-gaganābhēna Padmānābhēna śrīmad-Jāhnāvīya [ku]

2 lāmalā-vyōm-āvabhasana-bhāśkaraḥ svakhaḍgayka-prahara-khaṇḍita-mahā-silā-stambha-labdha-bala-

3 parākramō dāraṇōri-gaṇa-vidāraṇōpalabdha-braṇa-vibhūshaṇa-vibhūshita Kaṇvāyana-

4 sa-gōtrasya śrīmān-Koṅgaṇi-mahādhirāja ‖ tat-putra pitur-anvāgata-guṇa-yuktō vi-

5 dyā-vineya-vihita-vṛittaḥ samyāk-prajā-paḷanā-mātrādhigata-rājyāt-prayōjana vidvat-ka-

6 vi-kāñchana-nikāshōpala-bhūtō nīti-sāstrasya vaktri-payōktri-kusalasya Dattaka-sūtra-

7 vṛittiṟ-praṇētāṃ śrīmān-Mādhava-mahādhirāja ‖ tat-putra pitṛi-paitamahā-guṇa-yuktō-vanēka-

8 chāturddānta-yuddha vāpti-chatur-udadhi-salila-svadita-yasa śrīmad-Harivarmma-mahādhirāja ‖ ta-

9 t-putra ‖ dvija-guru-dēvatāṟ-pūjana-parō Nārayaṇa-charaṇanūdhdhata-śrīmad-Vishṇu-gōpa-ma-

*Second plate, front* :

10 hādhirāja ‖ tasya putra ‖ Tṛiyambhaka-charaṇābhōruha-rajaṟ-pavittṛikṛit-ōttamāṅga sva-bhuja-

11 bala parākrama-kṛiya-kṛita-rājya Kali-yuga-baḷa-paṃkāvasanna-dhṛishōdhdharaṇa-nitya-sanna[2]dhdha śrīmān-Mādha-

12 dha-mahādhirāja ‖ tasya putra ‖ śrīmad-Kadaṃba-kula-gagana-gabhasti-mālina Krishṇa-dharmmama-

13 hādhirājasya pṛiyā-bhāginēyō vidyā[3]-vineyatisaya-paripūritāntaratna niravagraha-prathāna-sau-

14 ryya vidvasuprathama-gaṇṇya śrīmān-Koṅgaṇi mahādhirāja Avinīta-nāmadhēya dattasya

15 Dēsiga-gaṇaṃ Koṇḍakundānvaya Guṇachandra-bhaṭāra-sishyasya Abhaṇandi-bhaṭara tasya sishyasya

16 Sīḷabhadra-bhaṭāra-sishyasya Jayaṇandi-bhaṭāra-sishyasya Guṇaṇa[4]ndi-bhaṭāra-sishyasya Chandaṇandi-bhaṭārargge ashṭā a-

---

[1] ಈ ಅಕ್ಷರವನ್ನು ಪಂಕ್ತಿಯ ಕೆಳಗೆ ಬರೆದಿದೆ.

[2] The letter *nna* is inserted below the line.

[3] *vidyā* is inserted below the line, with a small cross above, to show where it should come.

[4] The letter *ṇa* is inserted below the line.

17 sīti-uttarasya trayō-sa[1]tasya saṃvatsarasya Māgha-māsaṃ Śōmavāraṃ Svati-nakshatra suddha Pañchami Akāḷa-
18 varsha-Pṛithuvīvallabha-mantri Taḷavana-nagara-Śrīvijaya-Jinālaya[2]kke Pūnāḍu-chhā sahaśra Eḍenāḍu-sa-
19 ptari madhyē Badaṇeguppe-nāmā Avinīta-mahādhirājēna dattēna Paḍiyēḻaṟoḷaṃ ūrū-

*Second plate, back*:

20 roḷ pannir-kkaṇḍugaṅ-geydu ambali-maṇṇuṃ Taḷavana-puradoḷ taḷa-vittiya maṇ Pogarigeḷeyoḷ pa-
21 nnir-kkaṇḍugaṃ Pirikeṟeyoḷaṃ rājamānaṃ anumōdana pannir-kkaṇḍugaṃ manōharaṃ dattaṃ Badaṇeguppe-
22 grāmasya sīmāntaraṃ pūrbbasyaṃ-disi keṃjige moraḍiē Gajaseleye Karivaḷḷiya Koṭṭagara-Ba-
23 daṇeguppeya-trisandhiya satti-koṟaḍu āgnēyadin-ante bandu Kāgaṇi-taṭākaṃ puna dakshiṇasya
24 disi bahuśnuhiye Balkaṇi-vṛikshame puna paśchima-mukhade sanda bahumūlika-pantiye puna Ba-
25 daṇeguppeya-Koṭṭagara-Muḻtagiya-tṛisandhiya koḻe Vaṇḍigāle puna nairatyade sandu kathaka-vṛiksha-
26 me puna paśchimasyāṃ disi peḻd-uḻdil-vṛikshame sānteretiya vaṭā-mṛikshame puna tore-vaḷḷame uttarā-mukha-
27 de sanda bahumūlika-pantiye jambupaḍiya-taṭākame puna vāyavyade gaḻe chimcha-vṛikshame puna Badaṇe-
28 guppeya-Muḻtagiya-Koḷeyanūra-Dhāsanūra-tṛisandhiya nerggila-guṃbe niḍuveḷuṅge puna Gajasele-
29 ya-grāma uttara-disi kāyga-moṟaḍiē iḻidu keṃbareye puna pūrbba-mukhade sanda bahumūlika-pa-

*Third plate, front*:

30 ntiye puna kaḍapaḻtigāla vaṭa-vṛikshame puna isānade Badaṇeguppeya-Dāsanura-Poḻmada-trisandhiya
31 taṭākame koḍigaṭṭi chiñcha-vṛikshame Keṃta[3]ṟambina diṇeīṃ pūrbbade kūḍittu sīmāntaraṃ tasya sākshiṇa
32 Gaṅga-rāja-kula-sakalāsthayika-purusha Perbbakkavāṇa Maṟugareya Sēndrika Gaṃje-nāḍa Nirggunda Maṇiy-u-
33 gureya Nandyāla Sīmbāl ādapa bhṛityayāṃ dēsa-sākshi Tagaḍūra Kuḻugōvaru Gaṇiga-nūra Tagaḍaru Ālgō-
34 ḍa Tēnandakaruṃ Ummatūra Beḷḷuraruṃ Aḷageyaruṃ Badaṇeguppeya Jhaṃsanda[4] Beḷḷuraru perggiviyaruṃ ॥
35 sva-datta para-dattāṃ gvā yō harētha vasundharī shashṭiṃ varsha sahasrāṇi vishṭāyāṃ jāya[5]tē kṛimi ॥ va-

---

[1] The letter *sa* is inserted below the line.
[2] The letter *ya* is inserted below the line.
[3] The letter *ta* is inserted below the line.
[4] *Jhamsanda* is inserted below the line, with a small cross above, to show where it should come.
[5] The letter *ya* is inserted below the line.

36 subhi vasudhā bhuktaṃ rājabhis-Saka-rājabhi yasya yasya yadā bhūmi tasya tasya tadā paḷaṃ ‖ dēva-
37 svan-tu vishaṃ ghōraṃ na vishaṃ visham-uchyatē visham-ēkākinaṃ honti dēvasva putra-pautrikaṃ sāmānōyaṃ dha-
38 rmma-hētuṃ nṛipāṇāṃ kālē kālē pālanīyō bhavadbhi sarbbān-ētāṃ bhāgina pārttivēndrā bhūyō bhūyō
39 yāchatē Rāmabhadrā ‖ Visvakarmma likhitaṃ ‖

## 2 (5)

### ಮಡಿಕೇರಿ, ಮಡಿಕೇರಿ ತಾಲ್ಲೂಕು

ಸೆಂಟ್ರಲ್ ಸ್ಕೂಲಿನ ಆವರಣದಲ್ಲಿದ್ದು ಈಗ ಮಡಿಕೇರಿ ವಸ್ತುಸಂಗ್ರಹಾಲಯದಲ್ಲಿ ಇಟ್ಟಿರುವ ಶಿಲಾಶಾಸನ

The record is dated Śaka 921, Śārvvari, fullmoon day of the month Phālguṇa, Uttarābhādrapada, Sunday, corresponding to 10th February 1001 A.D. taking Śaka 921 as expired. But the week day was Monday and the constellation Magha.

Neither the dynasty nor the king is mentioned in the record. It records the valour of Hañchama-seṭṭi, son of Biha-gāmuṇḍa of Gaṇagūr who is said to have fought at Kuṇindōr and obtained several villages, named. He, in his turn, made a grant of a *khaṇḍuga* of land to the god Rāmēśvara after bathing in the Kāvēri.

1 ಸ್ವಸ್ತಿ ಶ್ರೀ ಶಕವರಿ
2 ಷ ೯೨೧ನೆಯ ಸಾ
3 ರ್ವ್ವರಿ ಸಂ
4 ವತ್ಸರ
5 ದ ಪಾಲ್ಗು
6 ಣ ಮಾಸ
7 ದ ಪುಣ್ಣಮೆ ಉತ್ತರೆ ಭಾ
8 ದ್ರಪದ ಅರ್ಕ್ಕವಾರದನ್ದು
9 ಗಣಗೂರ ಬಿಹಗಾಮು
10 ಣ್ಡನ ಮಗಂ ಹಞ್ಚ
11 ಮಸೆಟ್ಟಿ ಕುಣಿನ್ದೋರೊಳ್ಗಿಕ್ಕಿ
12 ಕಾಲಂ ತಿಟ್ದಿಊ ಕಾಲೂರಂ ಮಾ
13 ಡಿ ಮುಳ್ಳೂರ್ನ್ನಾಡ ಬೊಕನಹ
14 ಳ್ಳಿಯು ಹಕಾದಿವಾಡಿಯ ಗೊ
15 ರಹಳ್ಳಿ. . .ಯು. . .
16 ಳೆಯು ನಾಡ ಕೂಡಲೂರು
17 ಮಂ ತನ್ನ ಭುಜಬಲದಿನ್ದ
18 ಪಡೆದು ಮೊದಲ್ಕಾವೇರಿ
19 ಯಂ ಮಿನ್ದು ರಾಮೇಶ್ವರಮರ್ಚಿ
20 . . .ಬತ್ತು ಕಬ್ಬಿಳಂಗಳೆಊ ಧ
21 [ರ್ಮ್ಮ]ಕ್ಕೆ ಬಿಟ್ಟ ಮಣ್ಣು ಖಣ್ಡುಗ
22 ಈ ಧರ್ಮವನಳಿದಂ ಕವಿಲೆ
23 . . . . . . . .

## 3 (25)

### ಮಡಿಕೇರಿ, ಮಡಿಕೇರಿ ತಾಲ್ಲೂಕು

ಜಿಲ್ಲಾ ಕಛೇರಿಯ ಗೋಡೆಗೆ ಸೇರಿಸಿದ್ದು ಈಗ ಮಡಿಕೇರಿಯ ವಸ್ತುಸಂಗ್ರಹಾಲಯದಲ್ಲಿಟ್ಟಿರುವ ಶಾಸನ

The given date Śaka 1743, Ishu, Phālguṇa śu. 11, Sunday and Kali day 1798178 corresponds to Sunday, 3rd March, 1822 A.D.

The record belongs to the reign of Vīrarājēndra-vaḍeyar II, the last Rājā of Coorg. It records that Vīrarājēndra, on hearing the calamities caused by the great number of elephants in his country, hunted them, killing a large number and capturing many. In 2 years 1 month and 25 days he killed 233 elephants and his troops captured alive 181.

೭

# MAHARAJA VEER RAJENDER WADEER

1 ಸ್ವಸ್ತಿ ಶ್ರೀ ಜಯಾಭ್ಯುಧಯ ಶಾಲಿವಾಹನ ಶಕವರ್ಷ ೧೭೪೩ನೇ ಇಷು ಸಂವತ್ಸರದ ಪಾಲ್ಗುಣ ಶು ೧೧ಯು ಭಾನುವಾರಕ್ಕೆ ಕಲಿದಿನ ೧೭೯೮೧೭೮ನೇ ಈ ಶುಭದಿವಸದಲ್ಲಿ ಯಿಂದುವಂಶ ಕ್ಷೀರ ಪಾರಾವಾರ ಪಾರಿಜಾತಾಯ ಮಾನರಾದ| ಭರದ್ವಾಜ ಗೋ

2 ತ್ರ ಸಂಜಾತರಾದ ಆಶ್ವಲಾಯನ ಸೂತ್ರ ಋಕ್‌ಶಾಖಿಗಳಾದ ವೀರಶೈವಮತ ಧುರೀಣ ಪ್ರವೀಣರಾದ ಶ್ರೀಮತ್ಕೊಡಗು ಸಂಸ್ಥಾನ ಸಂಸ್ಥಿತಾನವಧ್ಯ ಕ್ಷೀರನಗರ ಮಧ್ಯ ಪರಿಭ್ರಾಜಮಾನ ಮಣಿಗಣಖಚಿತ ಚಾರು ಸಿಂಹಾಸನಾರೂಢರಾದ| ಅಪ್ರತಿಮ ಪ್ರತಾಪ ಪ್ರ

3 ಕಾಶ ಪ್ರಹಸಿತ ಮಾರ್ತಾಂಡ ಮಂಡಲರಾದ ಅಖಂಡಲಾಖಂಡ ವೈಭವ ಸಮೇತರಾದ| ಸಕಲ ದಿಗಂತರಾಳ ವಿದ್ಯೋತಮಾನ ಕೀರ್ತಿ ಪ್ರಖ್ಯಾತರಾದ| ಸಮಸ್ತ ಪ್ರಶಸ್ತ ರಾಜಧರ್ಮಾವಧರಣ ಯುಧಿಷ್ಠಿರರಾದ ಮಹಾರಾಜ ಲಿಂಗರಾಜೇಂದ್ರ ವಡೆಯರ ಪೌತ್ರರಾದ|

4 ಲಿಂಗರಾಜೇಂದ್ರ ವಡೆಯರವರ ಪುತ್ರರಾದ ಶ್ರೀ ವೀರರಾಜೇಂದ್ರ ವಡೆಯರವರು| ಸಧರ್ಮ ಸುಶೀಲ ಸುಚರ್ಯ ದಿಂದ ಪೃಥ್ವೀಸಾಂಮ್ರಾಜ್ಯಂ ಗೈಯುತ್ತ ಅನುಗಾಲದಲ್ಯ ಮಹಾದೇವ ಧ್ಯಾನ ಪರರಾಗಿ ಯಿರುತಿರುವ ತದನಂತರ ಸ್ವದೇಶದಲ್ಲು ವಾರಣಗಳು ಮಿತಮಿಾರಿ ಮಾ

5 ನವರು ತಂಮ ಉದರ ಪೋಶಣಾರ್ಥವಾಗಿ ರಚಿಸಿರುವಂಥ ಫಲ ಪೈರುಗಳಂನು ಕರಡು ಮಾಡಿದ್ದರಿಂದಲು ಪಾಂಥ ಜನರಂನು ಹಿಂಸೆಗೈದ್ದರಿಂದಲು ಭವನೋಪದ್ರಗೊಳಿಸಿದ್ದರಿಂದ ಸಹ ಇಂತಪ್ಪ ಬಾಧೆಗಳಿಂದ ನಿಸ್ತರಿಸಲಾರೆವೆಂದು ಪ್ರಜೆಗಳು ಬಿಂನೈಸಲಾಗಿ ದುಷ್ಟ ನಿ

6 ಗ್ರಹ ಶಿಷ್ಟಪರಿಪಾಲನೆ ಯೆಸಗುವಂಥಾದ್ದು ರಾಜಧರ್ಮವೆಂದು ಚಿತ್ತದಲ್ಲು ಅವಧರಿಸಿ ಯಿದಂನು ಪರಿಹರಿಸತಕ್ಕ ಸಾಮರ್ಥ್ಯವಂನು ಕರುಣಿಸಬೇಕೆಂತ ಗೌರಿಧವನಿಗೆ ಪ್ರಾರ್ಥಿಸಲಾಗಿ ತತ್ಸಾಂಬಶಂಕರನ ಪರಮಕೃಪಾನುಗ್ರಹ ಸಹಾಯವಾದ ಕಾರಣ ತದ್ದಿನದಾರಭ್ಯ ತಾ

7 ರಣ ಸಂವತ್ಸರದ ಚೈತ್ರ ಬ ೧೨ಯು ಚಂದ್ರವಾರ ಪರ್ಯ್ಯಂತ ವರುಷ ೨ ತಿಂಗಳು ೧ ದಿನ ೨೫ಕ್ಕೆ ಕಲಿದಿನ ೧೭೯೮೯೧೩ ಏತಾದೃಶ ದಿವಸದ ವಳಗೆ ಅರಂಣ್ಯ ಮಧ್ಯದಲ್ಲು ಐತರುವ ಮತ್ತಗಜಗಳ ಸಮೂಹಕ್ಕೆ ತದ್ವಾಹನಾಲಂಕಾರಯುಕ್ತದಿಂ ಚಿತ್ರೈಸಿ ಕಂಠೀರವನ ಪೋಲ್

8 ಪಡಿಗಟ್ಟೆ ಗಜಗಳೆಂಬ ಉಚ್ಚರಣೆಗೆ ನಾಣ್ನುಡಿ ಕಾಣಿಪಂತೆ ಅಜ ಸದೃಶಂ ಗೈದು ಸ್ವಸಾಮರ್ಥ್ಯದ ಭುಜಬಲ ಪರಾಕ್ರಮದಿಂದ ವಿದವಿದದಲ್ಲು ವಿರಾಮಗೈದ ಕುಂಜರಗಳು ಅಪ್ಪಣೆ ಪ್ರಕಾರ ಪಟುಭಟರು ಸಜೀವದಿಂದ ಕೈಸೆರೆ ಹಿಡಿದ ದಂತಿ

9 ಗಳು ಸಹ ಗಣನೆ ಯೆಷ್ಟೆಂದರೆ ಚಿತ್ರಭಾನು ಸಂವತ್ಸರದ ಆಷಾಡ ಬ ೧೦ಲ್ಲು ನಂಜ್ರಾಯಪಟ್ಟಣ ತಾಲೋಕಿನಲ್ಲಿ ಲಯವಾದ ಆನೆ ೬ ಕೈಸೆರೆಹಿಡಿದ ಆನೆ ೯ ಶ್ರಾವಣ ಬ ೭ಲ್ಲು ಸದ್ರಿ ತಾಲೋಕಿನಲ್ಲಿ ಲಯವಾದ ಆನೆ ೪೨ ಕೈಸೆರೆ ಹಿಡಿದ ಆನೆ ೨೨ ಅಧಿಕ ಆ

10 ಶ್ವಯುಜ ಶು ೫ಲ್ಲು ಸದ್ರಿ ತಾಲೋಕಿನಲ್ಲಿ ಉಲುಗುಲಿ ಮೂಡಗೇರಿ ನಾಡಿನಲ್ಲಿ ಸಹ ಲಯವಾದ ಆನೆ ೪೬ ಕೈಸೆರೆ ಹಿಡಿದ ಆನೆ ೧೫ ಈ ಶು ೧೧ಲ್ಲು ನಂಜ್ರಾಯಪಟ್ಟಣ ತಾಲೋಕಿನಲ್ಲಿ ಹೊರೂರು ನೂರೊಕ್ಕಲು ನಾಡಿನಲ್ಲಿ ಉಲುಗುಲಿ ಮೂಡಗೇರಿ ನಾಡಿನಲ್ಲಿ ಸಹ

11 ಲಯವಾದ ಆನೆ ೩೪ ಕೈಸೆರೆ ಹಿಡಿದ ಆನೆ ೬ ನಿಜ ಆಶ್ವಯುಜ ಶು ೧೧ಲ್ಲು ನಂಜ್ರಾಯಪಟ್ಟಣ ತಾಲೋಕಿನಲ್ಲಿ ಲಯವಾದ ಆನೆ ೨೦ ಕೈಸೆರೆ ಹಿಡಿದ ಆನೆ ೬ ಸ್ವಭಾನು ಸಂವತ್ಸರದ ನಿಜ ಚೈತ್ರ ಶು ೫ಲ್ಲು ಕೊಡಗು ಶ್ರೀರಂಗಪಟ್ಟಣದಲ್ಲಿ ಲಯವಾದ ಆನೆ

12 ೪ ಕೈಸೆರೆ ಹಿಡಿದ ಆನೆ ೧೮ ವೈಶಾಕ ಶು ೩ಲ್ಲು ಬೆಟ್ಟಯತ್ತ ನಾಡಿನಲ್ಲಿ ಚಂನನಕೋಟೆಯಲ್ಲು ಸಹ ಲಯವಾದ ಆನೆ ೨೧ ಕೈಸೆರೆ ಹಿಡಿದ ಆನೆ ೪೧ ತಾರಣ ಸಂವತ್ಸರದ ಚೈತ್ರ ಬ ೧೨ಲ್ಲು ಕಿಗ್ಗಟ್ಟು ನಾಡಿನಲ್ಲಿ ಲಯವಾದ ಆನೆ ೧೦ ಕೈಸೆರೆ ಹಿಡಿದ ಆನೆ ೪೦ ಯಿತ

13 ರ ತ್ರಿಶಂದ್ದಿನದಲ್ಲು ಲಯವಾದ ಆನೆ ೪೯ ಕೈಸೆರೆ ಹಿಡಿದ ಆನೆ ೨೪ ಅಂತು ಅಷ್ಟಾತ್ರಿಂಶದ್ದಿವಸಕ್ಕೆ ಸ್ವಹಸ್ತದಿಂದ ಲಯವಾದ ಆನೆ ೨೩೩ ಪಟುಭಟರು ಅಪ್ಪಣೆಪ್ರಕಾರ ಪ್ರಾಣಯುಕ್ತವಾಗಿ ಪಾಣಿಗ್ರಹಣವೆಸಗಿದ ಆನೆ ೧೮೧ ಉಭಯಂ ಗಜ ೪೧೪ ಯೀ

14 ತೆರದಲ್ಲು ಸಕಲ ಮನೋರಥಪ್ರದವಾಗಲಾಗಿ ವಿಸ್ಮಯ ಬಟ್ಟದ್ದು ಹ್ಯಾಗೆ ಯೆಂದ್ರೆ ವಿಪಿನಗಳಲ್ಲು ಅದ್ರಿ ಸಮಾಸ್ರಿತವಾದ ಕರಿ ಸಮೋಹಉ ದಿನಕರನಂಸು ಮೇಘಜಾಲ ಮುತ್ತುವ ತೆರದಂತೆ ಘೋರ್ಗುಡಿಸುತಾಗವಿುಸಲಾಗಿ ಶಿಡಿಲಿನೋಪಾದಿ ಯಿರುವಂಥ ಸಪ್ತಾರ್ಚಿ

15 ತಾಸ್ತ್ರ ಆಯ್ಧಗಳಿಂದ ತತುಕ್ಷಣದಲ್ಲು ನಿಗ್ರಹಿಸಿದಂಥಾದ್ದು ಸ್ಥೂಲೋಂನತವಾಗಿರುವಂಥ ಮದಗಜಗಳಂನು ಮೂಶಿಕನಂತೆ ಭಾವಿಸಿ ಮನುಜರು ಪ್ರಾಣಸಮೇತವಾಗಿ ಪರಿಗ್ರಹಿಸಿ ಯಿರುವಂಥ ಅತ್ಯಾಶ್ಚರ್ಯ

## 4

### ಮಡಿಕೇರಿ, ಮಡಿಕೇರಿ ತಾಲ್ಲೂಕು

ಅಂಜನಗಿರಿಯ ಜೈನಬಸದಿಯಲ್ಲಿದ್ದು ಈಗ ಮಡಿಕೇರಿಯ ವಸ್ತುಸಂಗ್ರಹಾಲಯದಲ್ಲಿ ಇಟ್ಟಿರುವ ಮೊದಲನೆಯ ಜಿನಬಿಂಬದ ಪೀಠದ ಮೇಲೆ

This undated record is in 12th century characters. It records the installation of the image of Śāntinātha by Māghaṇandi-bhaṭṭāraka of Tātangi who belonged to Mūla-saṅgha, Dēsiya-gaṇa, Pustaka-gachchha and Koṇḍakundānvaya. Since Māghaṇandi-bhaṭṭāraka was the disciple of Nayakīrti who died in 1176 A.D., the record may belong to the latter half of the 12th century A.D.

1 ಸ್ವಸ್ತಿಶ್ರೀ ಮೂಲಸಂಘ ದೇಸಿಯಗಣ ಪುಸ್ತಕಗಚ್ಛ ಕೊಂಡಕುಂದಾನ್ವ
2 ಯದ ತಾತಂಗಿಯ ಶ್ರೀ ಮಾಘಣಂದಿ ಭಟ್ಟಾರಕದೇ . .
3 ಶಾಂತಿನಾಥ ದೇವರ ಪ್ರತಿಷ್ಠೆಯ ಮಾಡಿದರು

## 5

### ಮಡಿಕೇರಿ, ಮಡಿಕೇರಿ ತಾಲ್ಲೂಕು

ವಸ್ತುಸಂಗ್ರಹಾಲಯದಲ್ಲಿರುವ ಅದೇ ಮೂರ್ತಿಯ ಬಲಪಕ್ಕದ ಪ್ರಭಾವಳಿಯ ಮೇಲೆ

This inscription, engraved above the attendent figure to the right, is in the characters of the 14th century A.D. It furnishes the date Manmatha, Kārtika śu. 1 which is not sufficient for verification. As the image belongs to the 12th century A.D. as pointed above in No. 4, it is not clear as to which date it refers to. The meaning of the last line is also not clear.

1 ಮನ್ಮಥ ಸ್ತರದ ಕರ್ತಿ
2 ಕ ಸು ೧ ಲೂ
3 ಭೌವುರ್ಗ್ಸಿತಿ

## 6

### ಮಡಿಕೇರಿ, ಮಡಿಕೇರಿ ತಾಲ್ಲೂಕು

ಅಂಜನಗಿರಿಯ ಜೈನಬಸದಿಯಲ್ಲಿದ್ದು ಈಗ ಮಡಿಕೇರಿಯ ವಸ್ತುಸಂಗ್ರಹಾಲಯದಲ್ಲಿ ಇಟ್ಟಿರುವ ಎರಡನೆಯ ಜಿನಬಿಂಬದ ಪೀಠದ ಮೇಲೆ

No date is given in the record. It may be assigned to the 12th century A.D. on palaeographical grounds.

It records that the *nakharas* of Tātaṅgi, who were the disciples of Harishchandra-dēvaru of Heragu, got prepared the image of Śāntinātha on whose pedestal the record is found. It is a beautiful image of Hoysaḷa workmanship. According to inscription No. 19 *infra*, this image and that of Ananthanātha were found in the Suvarṇāvati river during the 15th century A.D. and were consecrated in the *basadi* at Anjanagiri.

1 ಶ್ರೀಮತು ಸಮಸ್ತ ಗುಣ ಸಂಪಂನರಪ್ಪ
2 ಶ್ರೀ ಮೂಲಸಂಘ ದೇಸಿಯ ಗಣ ಪೊಸ್ತಕ ಗಛ
3 ಕೊಂಡಕುಂದಾನ್ವಯದ ಹೆರಗಿನ ಹರಿ
4 ಶ್ಚಾಂದ್ರ ದೇವರ ಪ್ರಿಯ ಗುಡ್ಡುಗಳಪ್ಪ ತಾತಂ
5 ಗಿಯ ಪಟ್ಟಣದ ನಖರಂಗಳು ಮಾ
6 ಡಿಸಿದ ಶ್ರೀ ಶಾಂತಿನಾಥ ದೇವರು
7 ಮಂಗಳ ಮಹಾ ಶ್ರೀ ಶ್ರೀ ||

## 7

### ಮಡಿಕೇರಿ, ಮಡಿಕೇರಿ ತಾಲ್ಲೂಕು

### ಅಂಜನಗಿರಿಯ ಜೈನಬಸದಿಯಲ್ಲಿದ್ದು ಈಗ ಮಡಿಕೇರಿಯ ವಸ್ತುಸಂಗ್ರಹಾಲಯದಲ್ಲಿ ಇಟ್ಟಿರುವ ಮೂರನೆಯ ಜಿನಬಿಂಬದ ಪೀಠದ ಮೇಲೆ

The record is not dated. On palaeographical grounds it may be assigned to the 12th century A. D. Nayakīrti Siddhānta Chakravartti mentioned in this record appears to be the same as the one mentioned in an inscription at Śravaṇabeḷgoḷa as having died in 1176 A.D. and hence the record may belong to the latter half of the 12th century A.D.

The image, on the pedestal of which the record is inscribed, is stated to have been got prepared and donated by Hariyaṇṇa-heggaḍe, a disciple of Nayakīrti Siddhānta Chakravartti. Hariyaṇṇa-heggaḍe is also stated to have been the head of the cavalry; but it is not known under which ruler he served.

The image, though not named in the record, is that of Anantanātha mentioned in inscription No. 19 as having been recovered from the Suvarṇāvati river.

1 ಸ್ವಸ್ತಿ ಶ್ರೀಮತು ನಯಕೀರ್ತ್ತಿ ಸಿದ್ಧಾಂತ ಚ
2 ಕ್ರವರ್ತ್ತಿಗಳ ಗುಡ್ಡ ಅಶ್ವಧ್ಯಕ್ಷದ
3 ಹರಿಯಣ್ಣ ಹೆಗ್ಗಡೆ ಮಾಡಿಸಿ ಕೊ
4 ಟ್ಟ ದೇವರು ಮಂಗಳ ಮಹಾ ಶ್ರೀ ಶ್ರೀ ||

## 8

### ಮಡಿಕೇರಿ, ಮಡಿಕೇರಿ ತಾಲ್ಲೂಕು

### ಕೋಟೆಯೊಳಗೆ ನ್ಯಾಯಾಲಯದ ಸಭಾಂಗಣದ ಗೋಡೆಗೆ ಸೇರಿಸಿರುವ ಹಿತ್ತಾಳೆ ತಗಡಿನ ಶಾಸನ

The record gives the date of the commencement of the construction of the palace as Śaka 1735, Āngirasa Bhādrapada śu. 1, Bhānuvāra, Kali day 1794663, which corresponds to Sunday, 6th September, 1812 A.D. The record belongs to the reign of Lingarāja II of Coorg. The inscription opens with a letter 'Liṃ' in Kannada followed by, 'Maharaja Lingarajender wadeer' in English. Then begins an Urdu inscription in four lines on the upper portion of the plate and there after follows the Kannada inscription, both of which furnish the same details. The genealogy of the king is also given in the record. It registers the construction of the palace

by Lingarāja. The construction work which began in 1812 A.D. was completed in 2 years, 1 month and 3 days i.e. in Bhāva, Āśvayuja śu. 3, Bhānuvāra, Kali day 1795433, which corresponds to Sunday, 16th October, 1814 A.D. It is stated in the record that the beautiful palace was constructed on the highest spot, after razing to ground a hillock.

ಲಿಂ

## MAHARAJA LINGARAJENDER WADEER

ಉರ್ದು ಲಿಪಿಯಲ್ಲಿ :

1 ಮೀಹ್ರ್ ಇ ಸಿಫೀರ್ ಷಜಾಯತ್ ಮ್ವಾ ಇ ಬುರ್ ಜ ಇ ಸಖಾವತ್ ಜಿನ್ನತ್ ಆರ್ ಆಯಿ ಅವರಂಗ್ ಇ ಜಹಾನ್ ಇಫ್ತ್ತಖಾರಿ ದೀಹೀವ್ ಇ ಗಯ್ವಾನ್ ಲಿಂಗರಾಜೇಂದ್ರ ಒಡೆಯರ್ ಇಬ್ನ್ ಲಿಂಗರಾಜೇಂದ್ರ ಒಡೆಯರ್ ಇಬ್ನ್ ಅಪ್ಪಾಜಿ ರಾಜೇಂದ್ರ ದಾಮಾ ಇಕ್ಬಾಲುಹಾ ಮಹಾರಾಜಾ ಇ ಕಿಷ್ವರ್ ಇ ಕೂರ್ಗ ಬತಾರೀಖ್ ಬೀಸ್ತ್ಓ ನಹುಮ್ ಇ

2 ಷಹ್ರ್ ಇ ರಮ್ ಜಾನ್ ಅಲ್ ಮುಬಾರಕ್ ಸನ್ ೧೨೨೭ ಹಿಜರಿಕೆ ಫತೆ ವೊ ಮಸರ್ರತ್ ವೊ ಬರಕತ್ ಇ ನಷೋ ನಾಮಾ ಇ ಜಹಾನ್ ಬೂದ್ ಬನಾ ಇ ಬುನ್ಯಾದ್ ಇ ದೌಲತ್ ಸರಾ ಇ ಆಲಿಯಾ ಬ-ಕಮಾಲ್ ಜೇಬಾ ಇ ವೊ ಸಫಾಯಿ ಮುಜಯ್ಯನ್ ಗರ್ ದಾಸಿದ್ವಾ ಲಿಂಗಾಯತ್ ಇ ಫರ್ರಾ ಇ ಮ್ವಾ ಇ ವ್ವಾಲ್ ಮುಅಜಜಾಮ ಸನ್ ೧೨೨೯ ಹಿಜಿರಿ ನಬವೊಯಿ

3 ಕೆ ಮುದ್ದತ್ ಇ ದೋ ಸಾಲ್ ವೊ ಏಕ್ ಮ್ವಾ ಇ ವೊಸಿಹ್ ರೋಜಮಿ ಷರದ್ ಬಹುಸುನ್ ಇ ಇನ್ಸಿರಮ್ ರಸಾನಿದನ್ದ ವೊ ಬಅದ ಜುಲೂಸ್ ಮಯಿಮ್ನತ್ ಮಾನೊಸ್ ಮಹಾರಾಜ ಮುಯಿಜ್ ಕೆ ಇಲ್ವಾಯಿ ತಾ ಕುಜಾಸಿಪಾಸ್ ವೊದಾ ತವಾನದ್ ಷುದ್ ಕೆ ಚುನೀನ್ ಕ್ವೊ ಬಲನ್ದ ತರ್ ರಾ ಬಿ–ನಿಷಾನ್

4 ಸಾಖ್ತಾ ಬಜಾಯಿಷ್ ಮಹಲ್ ಇ ಇಷ್ ರತ್ ಮರ್ತಬಾ ಕುನಾನೀದ್ ವ ಹರ್ ಕೆ ಬ-ಯಾದ್ ಇ ತೊ ಮಷ್ ಗುಲ್ ವೊ ಮುವಾಜಿಫ ಮೆ ಬಾಷದ್ ವೊರಾ ಫಥ್ ಇ ದೊ ಜಹಾನ್ ಅಸ್ತ್ಯ ಬಖಾತಿರ್ ಫಯ್ಜ ಮಾಆಥಿರ್ ಇ ಖುದ್ ಯಖೀನ್ ಅವರ್ ದ್ವಾ ಬಿನಾ ಇಬಾರ್ ಗಹೀ ಜಮ್ವಾರ್ ಅನಾಮ್ ಮರ್ಬೂಮ್ ವೊ ಮುಷ್ತಹಾರ್ ಫರ್ಮ್ಯಾನಿದನ್ದ

ಕನ್ನಡ ಲಿಪಿಯಲ್ಲಿ :

1 ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರ್ಷ ೧೭೩೪ನೇ ಆಂಗೀರಸ ಸಂವತ್ಸರದ ಭಾದ್ರಪದ ಶುದ್ಧ ೧ ಉ ಭಾನುವಾರಕ್ಕೆ ಕಲಿದಿನ ೧೭೯೪೬೭೦ ತದ್ದಿನ ಸುಮುಹೂರ್ತದಲ್ಲಿ | ನೂತನ ರಾ

2 ಜ ಮಂದಿರ ಪ್ರಾರಂಭ | ತದಾರಭ್ಯ ಭಾವ ಸಂವತ್ಸರದ ಆಶ್ವಯುಜ ಶುದ್ಧ ೩ ಯು ಭಾನುವಾರದ ವರೇಗೆ ವರ್ಷ ೨ ತಿಂಗಳು ೧ ದಿನ ೩ಕ್ಕೆ ಕಲಿದಿನ ೧೭೯೫೪೩೩ ಈ ಶುಭದಿವಸದಲ್ಲಿ | ಸೋಮ ವಂಶಾಬ್ಧಿ

3 ಕೌಸ್ತುಭಾಯಮಾನ ಭಾರದ್ವಾಜ ಗೋತ್ರೋತ್ಪನ್ನಾಶ್ವಲಾಯನ ಸೂತ್ರ | ಋಕ್ ಶಾಖಿ ವೀರಶೈವ ಮತಸ್ಥ ವೀರ ಸಿಂಹಾಸನಾರೂಢರಾದ ಶ್ರೀಮತ್ಕೊಡಗಿನ ಸಂಸ್ಥಾನದ ಮಹಾರಾಜ ಅಪ್ಪಾಜಿ ರಾಜೇಂ

4 ದ್ರರವರ ಪೌತ್ರರಾದ | ಲಿಂಗರಾಜೇಂದ್ರ ವಡೆಯರವರ ಪುತ್ರರಾದ ಶ್ರೀ ಲಿಂಗರಾಜೇಂದ್ರ ವಡೆಯರವರ್‍ರು | ರಾಜ ಭವನವಂನು ಅತಿ ವಿಚಿತ್ರದಿಂದ ಸಾಕಲ್ಯವಾಗಿ ನಿರ್ಮಾಣ ಮಾಡಿ

5 ಪ್ರವೇಶ ಮಾಡಿ | ವಿಸ್ಮಯಬಟ್ಟದು ಹ್ಯಾಗೆಂದರೆ ಶ್ರೀ ಮಹಾದೇವನ ದಯದಿಂದ ಅತ್ಯುಂನತವಾದ ಪರ್ವತಉ ನಿಃಶೇಷವಾದಂತ್ತಾದ್ದಾಗಿ | ಅದೇ ಸ್ಥಳದಲ್ಲಿ

6 ಪ್ರಕಾಶವಾದ ರಾಜಗೃಹಉ ನಿರ್ಮಿತವಾಯ್ತು | ಯಾರು ತತ್ಸಾಂಬಶಿವನ ಧ್ಯಾನ ಮಾಡುತಾರೊ ಅವರ್‍ರಿಗೆ ಇಹ ಪರದಲ್ಲಿಯು ಜಯವಿದೆ ತತ್ಕಾರಣಾದೀಶ್ವರ

7 ವೈಭವಾತಿಶಯಉ ವರ್ಣಿಸುವದಕ್ಕೆ ಅಸಾಧ್ಯವೆಂದು ನಿಜಾಂತಃಕರಣದಲ್ಲಿ ನಿಶ್ಚೈಸಿ ಸರ್ವ ಜನರ್‍ರಿಗು ಜ್ಞಾಪನಾರ್ಥವಾಗಿ ಬರಸಿದ ಶಾಸನ ॥ ಶುಭಮಸ್ತು ॥

TRANSLITERATION
(for Urdu inscription)

1 Mihr i sipihr i shujā'ṭ māh i burj i sakhāvat zīnat 'ārā i aurang i jahāṉ iftikhār i dīhīm i gaihaṉ Lingrajēndra-vadiyar ibn Lingrajēndra-vadiyar ibn Appāji-rājēndra dāma ikbāluhā mahārāja i kishvar i Coorg batārīkh i bīst o nahum i

2 Shahr i Ramaḍān al Mubārak 1227 Hijri ki fath o masarrat o barakat i nasho namā i jahāṉ būd bana i bun yad i davlat sarā i āliya ba-kamāl i zēbāī o safāi muzayyan gardānīdā linghāyat i gharra i māhi shavval al Muaẓẓam 1229 Hijri i Nabavi

3 ki muddat i dō sāl o yak māh o sih rōz mīsharad bahusn i insiram rasānīdand o bad i julūs i maimanat mānūs Mahārāja i mu'iz ki Ilāhī tā kujā sipās i 'ū adā tavānad shud ki chuniṉ koh i baland tar ra bē nishān

4 sākhta bajāyash mahalli 'ishrat murattab Kunānīd va har ki ba yād i tū mashghul o muvāzif mī bāshad 'ū rā fath i do jahān ast ba khāṭir i faiḍ ma' aṭhir i khud yagīn āvarda bina bar 'āgahī i jamhūr i anām marqūm mushtahar farmānīdand

## 9

### ಮಡಿಕೇರಿ, ಮಡಿಕೇರಿ ತಾಲ್ಲೂಕು

ಓಂಕಾರೇಶ್ವರ ದೇವಸ್ಥಾನದ ಬಾಗಿಲಿನ ಮೇಲಿರುವ ಹಿತ್ತಾಳೆ ತಗಡಿನ ಶಾಸನ

The date Śaka 1739, Īśvara, Jēshṭha ba. 2 Bhānuvāra and 1796392nd Kali day regularly corresponds to Sunday, 1st June, 1817 A.D.

The record belongs to the reign of Lingarājēndra-vaḍeyar II, the Rājā of Coorg and contains an account of the construction of the Ōṅkārēśvara temple at Mercara by the king. The construction of the temple began on the 1796392nd Kali day and it was completed in 2 years, 9 months and 25 days.

1 ಸ್ವಸ್ತಿ ಶ್ರೀ ಜಯಾಭ್ಯುದಯ ಶಕವರ್ಷ ೧೭೩೯ನೆ | ಯಿಾಶ್ವರ ಸಂವತ್ಸರದ | ಜೇಷ್ಟ ಬಹುಳ ೨ ಯು ಭಾನುವಾರಕ್ಕೆ ಕಲಿದಿನ ೧೭೯೬೩೯೨ನೆ ಯಿಾ ಶುಭದಿವಸದಲ್ಲಿ ಚಂದ್ರವಂಶ ಕ್ಷೀರ ಪಾರಾವಾರ ಪಾರಿಜಾತಾಯ

2 ಮಾನರಾದ | ಭರದ್ವಾಜ ಗೋತ್ರ ಸಂಜಾತರಾದ ಆಶ್ವಲಾಯನ ಸೂತ್ರ ಋಕ್ ಶಾಖಿಗಳಾದ | ವೀರಶೈವಮತ ಧುರೀಣ ಪ್ರವೀಣರಾದ ಶ್ರೀಮತ್ಕೊಡಗು ಸಂಸ್ಥಾನ ಸಂಸ್ಥಿತಾನವದ್ಯ ಕ್ಷೀರನಗರ ಮಧ್ಯ ಪರಿಭ್ರಾಜ ಮಾನ ಮ

3 ಣಿಗಣ ಖಚಿತ ಚಾರುಸಿಂಹಾಸನಾರೂಢರಾದ | ಅಪ್ರತಿಮ ಪ್ರತಾಪ ಪ್ರಕಾಶ ಪ್ರಹಸಿತ ಮಾರ್ತಾಂಡ ಮಂಡಲರಾದ | ಅಖಂಡಲಾಖಂಡ ವೈಭವ ಸಮೇತರಾದ | ಸಕಲ ದಿಗಂತರಾಳ ವಿದ್ಯೋತಮಾನ ಕೀರ್ತಿ ಪ್ರಖ್ಯಾತರಾದ

4 ಸಮಸ್ತ ಪ್ರಶಸ್ತ ರಾಜಧರ್ಮಾವಧಾರಣ ಯುಧಿಷ್ಟಿರರಾದ | ಮಹಾರಾಜ ಅಪ್ಪಾಜಿ ರಾಜೇಂದ್ರರವರ ಪೌತ್ರರಾದ | ಲಿಂಗರಾಜೇಂದ್ರ ವಡೆಯರವರ ಪುತ್ರರಾದ | ಶ್ರೀ | ಲಿಂಗರಾಜೇಂದ್ರು ವಡೆಯರವರು ಯಿಾ ಲೋಕದಲ್ಲಿ ಸುಕೃತ ಕ್ರಿಯೆ

5 ಗಳಂನು ವಿರಚಿಸಿದರೆ | ಇಹ | ಪರತ್ರ | ಯರಡರಲ್ಲಿಯು | ಶಾಶ್ವತ ಫಲಭರಿತವಾಗಿ ಯಿರಬೇಕು | ತತ್ಕಾರಣ ದಿಂದ ಮಹತ್ತರ ಪುಣ್ಯಫಲ ಪ್ರದಾಯಕವಾಗಿ ಯಿರುವಂಥಾ | ಶಿವಲಿಂಗ ಪ್ರತಿಷ್ಠಾಪನಉ ಕರ್ತವ್ಯ ವೆಂದು ಚಿ

6 ತ್ತದಲ್ಲಿ | ನಿಶ್ಚಯಿಸಿ ತದ್ದಿವಸ ಸುಮುಹೂರ್ತದಲ್ಲಿ | ಆಸದೃಶ ಶ್ರೀಕುಶಲ ಮಂಟಪಾದಿ ಯುಕ್ತ ರಾಜ ಕಮಲಾಕರಾಖ್ಯ ಪದ್ಮಾಕರಾಭಿರಾಮ | ನೂತನೋಂಕಾರೇಶ್ವರ ದೇವಸ್ಥಾನವಂನು ಪ್ರಾರಂಭಿಸಿ | ತದಾರಭ್ಯ | ವಿಕ್ರಮ ಸಂವತ್ಸ

7 ರದ ಚೈತ್ರ ಶುದ್ಧ ೧೨ ಯು ಭಾನುವಾರದ ವರೇಗೆ । ವರ್ಷ ೨ ತಿಂಗಳು ೯ ದಿನ ೨೫ಕ್ಕೆ। ಕಲಿದಿನ ೧೭೯೭೪೨೧ನೆ ಯೇತಾದೃಶ ಸುದಿವಸದಲ್ಲಿ । ಅತ್ಯಾಶ್ಚರ್ಯಕರವಾದಂಥದಂನು ಸಾಮಗ್ರ್ಯವಾಗಿ ನಿರ್ಮಿಸಿ । ಶ್ರೀಕರವಾಗಿ ಯಿರುವಂಥಾ ।

8 ಓಂಕಾರೇಶ್ವರ ನಾಮಕ ಶಿವಲಿಂಗವಂನು ಪ್ರತಿಷ್ಟಾಪಿಸಿ । ಸಂತುಷ್ಟಚಿತ್ತರಾದಂಥಾದ್ದು ಹ್ಯಾಗೆಯೆಂದರೆ । ಶ್ರೀಮಚ್ಚಂದ್ರಶೇಖರನ ಪರಮ ಕೃಪಾನುಗ್ರಹ ಸಾಮರ್ಥ್ಯದಿಂದ ಸಕಲಮನೋರ

9 ಥ ಪ್ರದವಾಗಿ ಯಿರುವಂಥಾ ಏತದ್ದೇವತಾಯತನ ಶಿವಲಿಂಗ ಪ್ರತಿಷ್ಠಾಪನಉ । ನಿರ್ವಿಘ್ನದಿಂದ ವಿರಚಿತ ವಾಯಿತು । ಯಾರು ಭಕ್ತಿಯಿಂದ ಶ್ರೀಮಹೇಶ್ವರನ ಭಜಿಸುತಾರೋ ಅವ

10 ರಿಗೆ ಸರ್ವತ್ರ । ಅನಿತರ ಸಾಧ್ಯವಾಗಿ ಯಿರುವಂಥಾ ಶುಭಫಲಉ ಸ್ವಯಮೇವ ಸಾಧ್ಯವಾಗುತದೆ ಯೆಂದು । ಸರ್ವಜನ ಪರಿಜ್ಞಾನಾರ್ಥವಾಗಿ ಬರಸಿ ಯಿರುವಂಥಾ ಶಾಸನ ॥ ಶುಭಮಸ್ತು ॥

## 10

### ಮಡಿಕೇರಿ, ಮಡಿಕೇರಿ ತಾಲ್ಲೂಕು

### ಓಂಕಾರೇಶ್ವರ ದೇವಸ್ಥಾನದ ಬೆಳ್ಳಿಯ ತಟ್ಟೆಯ ಮೇಲಿರುವ ಶಾಸನ

No date is given in the record. It may be assigned to the 19th century A. D. on palaeographical grounds. The record merely gives the name of the temple of Vōṅkārēśvara indicating that the silver plate on which the inscription is found belongs to that temple.

1 ವೋಂಕಾರ್ರೇಶ್ವರ ದೇವಸ್ಥಾನ

## 11 (17)

### ಮಡಿಕೇರಿ, ಮಡಿಕೇರಿ ತಾಲ್ಲೂಕು

### ಓಂಕಾರೇಶ್ವರ ದೇವಸ್ಥಾನದ ತಾಮ್ರಶಾಸನ

The record is engraved on a single copper plate and its contents regarding the construction of the Ōṅkārēśvara temple are similar to those of the record No. 9 above. After giving the details of the date and construction of the temple, the record proceeds to give the details of the grants made for the maintenance and worship of the god by Lingarājēndra-vaḍeyar II, the Rājā of Coorg.

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೭೩೯ನೆ ಯೀಶ್ವರ ಸಂವತ್ಸರದ ಜೇಷ್ಠ ಬಹುಳ ಬಿದಿಗೆಯು ಭಾನುವಾರಕ್ಕೆ ಕಲಿದಿನ ೧೭೯೬೯೨ನೆ ಯೀ ಶುಭದಿವಸದಲ್ಲಿ ಚಂದ್ರವಂಶ ಕ್ಷೀರ ಪಾರಾವಾರ ಪಾರಿಜಾತಾಯಮಾನರಾದ ಭಾರದ್ವಾಜ ಗೋತ್ರ ಸಂಜಾತರಾದ ಆಶ್ವಲಾಯನ ಸೂತ್ರ ಋಕ್ಯಾಖಿಗಳಾದ ವೀರಶೈವಮತ ಧುರೀಣ ಪ್ರವೀಣರಾದ ಶ್ರೀಮತ್ಕೊಡಗು ಸಂಸ್ಥಾನ ಸಂಸ್ಥಿತ ಸಮಾದ್ಯ ಕ್ಷೀರನಗರ ಮಧ್ಯ ಪರಿಭ್ರಾಜಮಾನ ಮಣಿಗಣ ಖಚಿತ ಚಾರು ಸಿಂಹಾಸನಾರೂಢರಾದ ಅಪ್ರತಿಮ ಪ್ರತಾಪ ಪ್ರಕಾಶ ಪ್ರಹಸಿತ ಮಾರ್ತಾಂಡ ಮಂಡಲರಾದ ಅಖಂಡಾಖಂಡ ವೈಭವ ಸಮೇತರಾದ ಸಕಲದಿಗಂತರಾಲ ವಿದ್ಯೋತ್ತಮ ಸಮಾನಕೀರ್ತಿ ಪ್ರಖ್ಯಾತರಾದ ಸಮಸ್ತ ಪ್ರಶಸ್ತ ರಾಜಧರ್ಮಾವಧಾರಣ ಯುಧಿಷ್ಠಿರರಾದ ಮಹಾರಾಜ ಅಪ್ಪಾಜಿ ರಾಜೇಂದ್ರರವರ ಪೌತ್ರರಾದ ಲಿಂಗರಾಜೇಂದ್ರ ವಡೆಯರವರ ಪುತ್ರರಾದ ಶ್ರೀ ಲಿಂಗರಾಜೇಂದ್ರ ವಡೆಯರವರು ಯಿ಼ಾ ಲೋಕದಲ್ಲಿ ಸುಕ್ರುತ ಕ್ರಿಯೆಗಳನ್ನು ವಿರಚಿಸಿದರೆ ಇಹ ಪರಮೆರಡರಲ್ಲಿಯೂ ಶಾಶ್ವಿತ ಫಲಭರಿತರಾಗಿ ಯಿರಬೇಕು ತತ್ಕಾರಣದಿಂದ ಮಹತ್ತಾದ ಪುಣ್ಯಫಲ ಪ್ರದಾಯಕವಾಗಿ ಯಿರವಂಥಾ ಶಿವಲಿಂಗ ಪ್ರತಿಷ್ಠಾಪನಉ ಕರ್ತವ್ಯವೆಂದು ಚಿತ್ತದಲ್ಲಿ ನಿಶ್ಚಯಿಸಿ ತದ್ದಿವಸ ಶುಭ ಮುಹೂರ್ತದಲ್ಲಿ ಅಸದ್ರುಶ ಶ್ರೀಕುಶಲ ಮಣ್ಟಪಾದಿ ಯುಕ್ತ ರಾಜಕಮಲಾಕರಾಖ್ಯಾ ಪದ್ಮಕರಾಭಿರಾಮ ನೂತನೋಂಕಾರೇಶ್ವರ ದೇವಸ್ಥಾನವನ್ನು ಪ್ರಾರಂಭಿಸಿ ತದಾರಭ್ಯ ವಿಕ್ರಮ ಸಂವತ್ಸರದ ಚೈತ್ರ ಶುದ್ಧ ದ್ವಾದಸಿಯು ಭಾನುವಾರದವರಿಗೆ ವರುಷ ೨ ತಿಂಗಳು ೯ ದಿನ ೨೫ ಕಲಿದಿನ ೧೭೯೭೪೨೧ ನೆ ಯೇತದ್ರುಶ ಸುದಿವಸದಲ್ಲಿ ಅತ್ಯಾಶ್ಚರಕವಾದಸ್ಥಾದ್ದನ್ನು ಸಾಮಗ್ರಿಯವಾಗಿ ನಿರ್ಮಿಶಿ ಶ್ರೀಕರವಾಗಿಯಿರುವಂಥ ಓಂಕಾ

ರೇಶ್ವರ ನಾಮಕ ಶಿವಲಿಂಗವನ್ನು ಪ್ರತಿಷ್ಠಾಪಿಸಿ ಸನ್ತುಷ್ಟಚಿತ್ತರಾದ್ದು ಹ್ಯಾಗನ್ದರೆ ಶ್ರೀಮಚ್ಚಂದ್ರಶೇಖರನ ಪರಮಕೃಪಾನುಗ್ರಹ ಸಾಮರ್ಥ್ಯದಿಂದ ಸಕಲ ಮನೋರಥ ಪ್ರದವಾಗಿ ಯಿರುವಂಥ ಯೇತದ್ದೇವತಾಯತ್ನ ಶಿವಲಿಂಗ ಪ್ರತಿಷ್ಠಾಪನಲು ನಿರ್ವಿಘ್ನದಿಂದ ವಿರಚಿತವಾಯಿತು ಯಾರು ಭಕ್ತಿಯಿಂದ ಶ್ರೀ ಮಹೇಶ್ವರನ ಭಜಿಸುತ್ತಾರೋ ಅವರಿಗೆ ಸರ್ವತ್ರ ಅನಿತರ ಸಾಧ್ಯವಾಗಿ ಯಿರುವಂಥ 'ಶುಭಫಲಉ ಸ್ವಯಮೇವ ಸಾಧ್ಯವಾಗುತ್ತದೆಯೆಂದು ಸರ್ವಜನ ಪರಿಜ್ಞಾನಾರ್ಥವಾಗಿ ಬರಸಿ ಯಿರುವಂಥ ಶಾಸನ ॥ ಶುಭಮಸ್ತು ॥

ಅಂತು ವರುಷ ೧ಕ್ಕೆ ಓಂಕಾರೇಶ್ವರ ಗಣಾಧೀಶ್ವರ ಕುಮಾರೇಶ್ವರ ಶ್ರೀನಂದೀಶ್ವರ ದೇವರಿಗೆ ಸಹ ಆಚಂದ್ರಾರ್ಕವಾಗಿ ಶಾಶ್ವಿತದಿಂದ ನಡೆದು ಬರತಕ್ಕ ಬಗ್ಯೆ ನಿತ್ಯಕಟ್ಲೆ ಅನ್ಮೃತಪಡಿ ನಂದಾದೀಪ ವಿಶೇಷಕಟ್ಲೆ ಪಂಚಪರ್ವ ಸಂಬಳಗಾರ ಜನಕ್ಕೆ ಸಹ ಅಪಣೆ ಕೊಡಿಸಿಯಿರುವ ಕಂಠೀರಾಯಿ ೧೨೨೧ ವಂದು ಸಾವಿರ ಯಿನ್ನೂರ ಯಿಪ್ಪತ್ತೊಂದು ವರಹಕ್ಕೆ ಹಣದಿಂದ ಜಿನಿಶಿಜಾಳಿ ಮುಂತಾದರಿಂದ ಉತ್ತಾರವನ್ನು ಧರ್ಮಸಂಗ್ರಹದ ಬಗ್ಯೆ ಅರಮನೆ ದಿರ್ವಾ ಕಚೇರಿ ಹಸ್ತಾಂತ್ರದಿಂದ ಪ್ರತಿ ಸಂವತ್ಸರದಲ್ಲು ಕೊಡಿಸಿಕೊಟ್ಟು ಸೇವಾರ್ಥವಾಗಿ ವಿನಿಯೋಗಕ್ಕೆಂದು ನೇಮಿಸಿಯಿರುವಂಥವರಿಂದ ಕಾಲತ್ರಯದಲ್ಲು ಶಾಸ್ತ್ರಪ್ರಕಾರ ದೇವತಾ ಸೇವೆಯನ್ನು ಸಾಂಗವಾಗಿ ಮಾಡಿಸುತ್ತ ದಿನಂಪ್ರತಿ ವಿಚಾರಿಸಿಕೊಂಡು ವರುಷಂಪ್ರತಿ ಯಿಾ ದೇವಸ್ಥಾನದ ಲೆಕ್ಕಪಕ್ಕ ಮುಂತಾದ್ದನ್ನು ಜಡ್ತಿ ತೆಗೆದುಕೊಳ್ಳುತ್ತ ಬರುವದಾಗಿ ಯಂಬ ತಸ್ತೀಕು ನಿರೂಪಕ್ಕೆ ಅಪ್ಪಣೆ ಪ್ರಕಾರ ಕಲಿವರ್ಷ ೪೯೨೨ನೆ ವಿಕ್ರಮ ಸಂವತ್ಸರದ ನಿಜ ಜೇಷ್ಠ ತಾರೀಕು ೨೨ನೆ ಭಾನುವಾರ ॥

ಶ್ರೀ ಲಿಂಗರಾಜೇಂದ್ರ ವಡೆಯರವರು

## 12

### ಮಡಿಕೇರಿ, ಮಡಿಕೇರಿ ತಾಲ್ಲೂಕು

### ಓಂಕಾರೇಶ್ವರ ದೇವಸ್ಥಾನದ ಗಂಟೆಯ ಮೇಲಿರುವ ಶಾಸನ

The year [18]85 A.D. and the month January are mentioned in the record.

It registers the grant of a bell to the god Mahāgaṇapati in the Ōṅkārēśvara temple by Lingaṇṇa, son of Kenche-gauḍa of Mysore.

1 ಸಂನ್ ೮೫ ಜನವರ್‍ರಿ ತಿಂಗಳು

2 ಮೈಸೂರು[1] ಕೆಂಚಿಗೌ[ಡ]ನ ಮಗ ಲಿಂಗಂಣನು ಮಾಹಗಣಪತಿಗೆ ಶಿವರ್ತಿ

## 13

### ಮಡಿಕೇರಿ, ಮಡಿಕೇರಿ ತಾಲ್ಲೂಕು

### ರಾಜರ ಗದ್ದಿಗಿಯ ಆವರಣದಲ್ಲಿರುವ ಒಂದನೇ ಸಮಾಧಿಯ ಪಶ್ಚಿಮದಿಕ್ಕಿನ ಗೋಡೆಗೆ ಸೇರಿಸಿರುವ ಶಿಲಾಶಾಸನ

The record is dated Kali 4909, Prabhava, Mārgaśira, śu. 2 Sunday. This corresponds to Sunday, 6th December, 1807 A.D.

The record belongs to the reign of Vīrarājēndra-vaḍeyar I, the Rājā of Coorg. He is styled as mahārāja in the inscription. This is a memorial tablet set up by the king on the death of his trusted servant Biddaṇḍra Bopu. Biddaṇḍra Bopu is said to have served the king for nineteen years in the hunting of elephants, tigers and other wild beasts and also in the battle against Tipu Sultan. His unflinching and honest services have been praised by the king. The inscription contains the signature of the king.

1 ಮಹಾರಾಜ ವೀರರಾಜೇಂ

2 ದ್ರ ವಡೆಯರವರ[2]

3 ಭಂಟ

---

[1] ಈ ಪದವನ್ನು ಕೆಳಗೆ ಹಂಸಪಾದ ಹಾಕಿ ಮೇಲೆ ಸೇರಿಸಿದೆ.

[2] ಇಲ್ಲಿ ವೀರರಾಜೇಂದ್ರನ ರಾಜಮುದ್ರೆ ಇದೆ.

4 ಕಡಿಯತ್ತುನಾಡ ಬಾವಲಿ ಗ್ರಾಮದ ಬಿದ್ದಂಡರ
5 ಬೊಪು ಕೀಲಕ ಸಂವತ್ಸರದ ಮಾಘ ಬ ೫ ದಿವಸ ಅ
6 ರಮನೆ ಚಾಕ್ರಿಗೆ ಬಂದಂತಾವನು ಪ್ರಭವ ಸಂ
7 ವತ್ಸರದ ವರ್‍ರಿಗೆ ಹತ್ತೊಂಬತು ವರುಷ ಪರ್‍ರಿಯಂ
8 ತ್ರಕು ಆನೆಬೇಟೆಯಲ್ಲಿ ಹುಲಿಬೇಟೆಯಲ್ಲು ಮ್ರುಗ
9 ಜಾತಿಗಳ ಬೇಟೆಯಲ್ಲು ಟೀಪು ಸುಲುತಾನರ ಮೇಗಳ
10 ಲಡಾಯದಲ್ಲು ಮುಂತಾದ ಅರಮನೆ ಚಾಕ್ರಿಯಲ್ಲು ಅ
11 ಪಣೆ ಆದ ಮೇರ್‍ರೆ ದಿವಾರಾತ್ರೆಯಲ್ಲೂ ಪ್ರಾಣ ಪ್ರ
12 ಯತ್ನದಿಂದ ಅಶಿಧೈರ್ಯದಿಂದ ಬಂಟತನಮಾಡಿ ಸ್ವಾಮಿ ಕಾ
13 ರ್‍ಯ್ಯ ಮುಖ್ಯವಾಗಿ ನಡಕೊಂಡಂತಾ ಸರಕಾರ್‍ರೆಕಾರ ಬೊಪು
14 ಕಲಿಸಂದ ೪೯೧೯ನೆ ಪ್ರಭವಸಂ । ಮಾರ್ಗಶಿರ ಶು ೭ ಯು ಭಾ
15 ನುವಾರ ಗಳಿಗೆ ೩೨॥ ಂಗೆ ಶಿವಾದೀನವಾದ್ದರ್‍ರಿಂದ ಯಿಾತ ಮಾ
16 ಡಿದಂತ್ತಾ ಸಿಂಮ್ಮ ಕುಹಲಾಲತನ ಬಂಟತನ ಪ್ರಾಣ ಆಪ್ತ
17 ಏಕೆಯಲ್ಲಿ ಸಹ ತ್ರಿಕರಣ ಶುದ್ದವಾಗಿ ನಡಕೊಂಡಂತ್ತಾ ತಾರ್‍ರಿ
18 ಪಂನ್ನು ಕಾವಂದರು ಶಿಲೆಯಲ್ಲು ಬರಶಿ ಸಮಸ್ತರ್‍ರು ತಿಳಿಯು
19 ವ ಬಗ್ಯೆ ಅವನ ಸಮಾದಿ ಮುಂದೆ ಸ್ಥಾಪನೆ ಮಾಡಿಸಿ ಯಿಾ
20 ದಾರೆ ಶ್ರೀ ವಿ Veer Rajendir

## 14

### ಮಡಿಕೇರಿ, ಮಡಿಕೇರಿ ತಾಲ್ಲೂಕು

ರಾಜರ ಗದ್ದಿಗೆಯ ಆವರಣದಲ್ಲಿರುವ ಎರಡನೆಯ ಸಮಾಧಿಯ ಪಶ್ಚಿಮದಿಕ್ಕಿನ ಗೋಡೆಗೆ ಸೇರಿಸಿರುವ ಶಿಲಾಶಾಸನ
(ಈ ಶಾಸನ ಮೊದಲು ಇಂಗ್ಲಿಷಿನಲ್ಲಿಯೂ ಅನಂತರ ಕನ್ನಡದಲ್ಲಿಯೂ ಇದೆ)

The record is dated Saturday, 16th of August, 1879 A.D.

It is a memorial tablet set up in memory of B. Sōmaiya, eldest son of Biddaṇḍra Bopaṇṇa. He was the *sirkārekār* of Chikkavīrarājēndra. His body was interned in the burial grounds belonging to the Rājās of Coorg at the orders of the Chief Commissioner of Coorg. This *samādhi* was erected by his son B. S. Ponnappa by the side of the *samādhi* of Biddaṇḍra Bopu mentioned in the previous record.

1 ಕೊಡಗು ದೊಡ್ಡವೀರರಾಜೇಂದ್ರ ವೊಡೆಯರವರ ಸಿರ್‌ಕಾರೇಕಾರ್
2 ಬಿದ್ದಂಡ್ರ ಬೊಪಂಣನವರ ಪ್ರಥಮಪುತ್ರ ಮುತ್ತು ಚಿಕ್ಕವೀರರಾ
3 ಜೇಂದ್ರ ವೊಡೆಯರವರ ಸಿರ್‌ಕಾರೇಕಾರ್ ಬಿ । ಸೊಮ್ಮೈಯ್ಯನವ
4 ರು 1800ನೆ ಯಿಸವಿ ರವುದ್ರಿ ಸಂವತ್ಸರದಲ್ಲಿ ಜನನವಾಗಿ
5 1879ನೆ ಯಿಸವಿ ಆಗೀಷ್ಟು ತಾರೀಕು 16ನೆ ಶನಿವಾರ ಪ್ರಾತಃಕಾ
6 ಲ 6 ಘಂಟೆಗೆ ಸ್ವರ್ಗಸ್ಥರಾದರು
7 ಕೊಡಗು ಚೀಫ್‌ಕಮಿಾಷನರ್ ಸಾಹೇಬರ ಹುಕುಂ ಮೇರೆ ಕೊಡ
8 ಗು ಧೊರೆಗಳ ಲಿಂಗಮುದ್ರೆ ಗೊಳಪಟ್ಟ ಸಿವೇಶನದೊಳಗಣ ಕ
9 ಬರ್ ಸ್ಥಾನದಲ್ಲಿ ದಪನ್ ಮಾಡಿಸಿ ಸರ್ವರೂ ತಿಳಿಯುವ ಬಗ್ಯೆ ಶಿಲಾಸ್ಥಾ
10 ಪನೆ ಮಾಡಲ್ಪಟ್ಟಿದೆ
11 Erected By His Dear Son B. S. Ponnappa

## 15

### ಮಡಿಕೇರಿ, ಮಡಿಕೇರಿ ತಾಲ್ಲೂಕು

ರಾಜರ ಗದ್ದಿಗೆಯ ಪಕ್ಕದ ಗುರುಗದ್ದಿಗೆಯ ಹಿಂಭಾಗದ ಗೋಡೆಯ ಮೇಲೆ ಇರುವ ಶಾಸನ

The inscription is engraved on the plaster wall of the structure. It does not contain any date. The script appears to belong to the 19th century A.D. The inscription records the name Subaiya, probably, the person who built the structure. He resided in the village Bāḍaga belonging to Kārattu mūrnāḍu.

1 ಕಾರತ್ತು ಮೂರ್ನಾಡ ಬಾಡಗ ಗ್ರಾಮದಲ್ಲೂ ಯಿರುವೊಡೆಯ ಸು
2 ಬೈಯನಉರು ಕ

## 16

### ಮಡಿಕೇರಿ, ಮಡಿಕೇರಿ ತಾಲ್ಲೂಕು

ರಾಜರ ಗದ್ದಿಗೆಯ ಆವರಣದ ಮೂಲೆಗಳಲ್ಲಿರುವ ಮೂರು ಕಲ್ಲುಗಳ ಮೇಲೆ

The record merely mentions the Kali year 4909 which is equivalent to 1808 A.D. The same inscription is found repeated on three stones at different quarters around the Rājā's tombs, probably indicating the demarcation of the royal burial ground.

1 ಕಲಿಸಂದ ೪೯೦೯

## 17

### ಮಡಿಕೇರಿ, ಮಡಿಕೇರಿ ತಾಲ್ಲೂಕು

ಕನ್ನಿಕಾಪರಮೇಶ್ವರಿ ದೇವಾಲಯದ ಬಾಗಿಲವಾಡದ ಮೇಲೆ ಹಿತ್ತಾಳೆ ತಗಡಿನ ಮೇಲಿರುವ ಶಾಸನ

The record is dated Śaka 1796, Bhāva, Jēshṭha ba. 5 Guruvāra and its equivalent of the Christian era, *viz.*, 4th June, 1874 A.D. is also mentioned.

The record registers the completion of the construction of the Kannikāparamēśvari temple on the date and also states that the doorways of the temple were got prepared out of the income from the shop belonging to Nāgayya-seṭṭi.

1 ಶ್ರೀ ವಾಸವಾಂಬ ಸಹಾಯ
2 ಶಾಲಿವಾಹನ ಶಕಾಬ್ದಾಃ ೧೭೯೬ ಕ್ಕೆ ಸರಿಯಾ
3 ದ ಭಾವನಾಮ ಸಂ| ರದ ಜೇಷ್ಟ ಬಹುಳ ೫ ಗುರುವಾ
4 ರದವರಿಗೆ ಶ್ರೀ ಕಂನ್ನಿಕಾ ಪರಮೇಶ್ವರಿ ದೇವಸ್ತಾನದ ಕೆಲ
5 ಸ ಪೂರೈಸಿದೆ ನಾಗೈಯ ಶಟ್ರಿ ಪಾಲಿನ ಅಂಗಡಿಯಿಂದಾ
6 ದ್ವಾರಗಳಿಗೆ ಬಾಗಿಲವಾಡಗಳ ಸೇವಾರ್ಥಾ
7 ಸರ್ಂ ೧೮೭೪ನೆ ಜೂ೯ ತಾರಿಕು ೪ ರಲ್ಲೂ

## 18

### ಮಡಿಕೇರಿ, ಮಡಿಕೇರಿ ತಾಲ್ಲೂಕು

ಕನ್ನಿಕಾಪರಮೇಶ್ವರಿ ದೇವಾಲಯದ ಬಾಗಿಲಿನ ಪಟ್ಟಿಯ ಮೇಲಿರುವ ಶಾಸನ

The date Pramāthi, Śrāvaṇa śu. 5, Guruvāra, and its equivalent in the Christian era, *viz.*, Thursday, 24th July, 1879 A.D. are mentioned in the record.

The record registers the grant of the brass plate covering the doors of the Kannikāparamēśvari temple got prepared out of the income from the shop of Nāgayya-seṭṭi.

1 ॥ ಶ್ರೀ ॥ ವಾಸವಾಂಬಾ ॥ ಸಹಾಯಂ ನಾಗ್ಯೆ
2 ಯ ಶೆಟ್ರಿ ಪಾಲಿನ ಅಂಗಡಿ ಶೇವಾರ್ಥ
3 ಪ್ರಮಾತ್ತಿ ನಾಮ ಸಂವತ್ಸ
4 ರದ ಶ್ರಾವಣ ಶ್ದು ೫ ಮಿ ಗುರ್ರು
5 ವಾರ

ಇನ್ನೊಂದು ಬಾಗಿಲಿನ ಪಟ್ಟೆಯ ಮೇಲೆ

6 ಸರ್ಂ ೧೮೭೯ ನೆ ಯ್ಸವಿ ॥ ಜುಲಾಯಿ ತಾರ್‍ಕು ೨೪ ನೆ ಗುರುವಾರ ॥

## 19 (10)

### ಅಂಜನಗಿರಿ, ಮಡಿಕೇರಿ ತಾಲ್ಲೂಕು

### ಬಸದಿಯಲ್ಲಿರುವ ಶಿಲಾಶಾಸನ

The record is dated Śaka 1466 expired, Krōdhi being current, 15th of the bright fortnight of Kārtika which corresponds to 30th October, 1544 A.D.

Neither the king nor the dynasty is mentioned in the inscription. It is a Jaina record which eulogises Chārukīrti-paṇḍita-dēva of Beḷagoḷa and his disciples. It gives an interesting information that the images of Śāntitīrthēśvara and Anantanāthasvāmi were found in the Suvarṇāvati river in Śaka 1453 which were brought over to Anjanagiri and were consecrated in the Śāntinātha-basadi. This *basadi* was first constructed in wood and later on it was rebuilt in stone. The images consecrated in this *basadi* have inscriptions on their pedestals which go back to the 12th century A.D. on palaeographical grounds. (see Nos. 4, 6 and 7)

The record also mentions the grants made for the maintenance of the *basadi* by various persons.

1 ಶ್ರೀ ಶಾಂತಿನಾಥಾಯ ನಮಃ ॥ ನಿರ್ವಿಘ್ನಮಸ್ತು ॥ ಶುಭಮಸ್ತು ॥
2 ಶ್ರೀ ಮತ್ಪರಮಗಂಭೀರಸ್ಯಾದ್ವಾದಾಮೋಘ ಲಾಂಚ್ಛನಂ। ಜೀಯಾತ್ತ್ರೈಲೋಕ್ಯನಾಥ
3 ಸ್ಯ ಶಾಸನಂ ಜಿನ ಶಾಸನಂ ॥ ಸ್ವಸ್ತಿ ಶ್ರೀ ಮೂಲಸಂಘ ದೇಶಿಗಣ ಪುಸ್ತಕಗ
4 ಚ್ಛ ಕುಂಡಕುಂದಾನ್ವಯದ ಯಿಂಗಳೇಶ್ವರವಳಿಯ ಶ್ರೀ ಮದ್ಬೆಳುಗುಳಪುರವರಾ
5 ಧೀಶ್ವರ ಗುಂಮ್ಮಟ ಜಿನೇಶ್ವರ ಪಾದಪದ್ಮ ಮತ್ತ ಮಧುಕರಾಯಮಾನರಾದ ತ
6 ತ್ಕಾಲಧರ್ಮ್ಮ ಪ್ರವರ್ತ್ತಕರಾದ ಧರ್ಮ್ಮಾಚಾರ್ಯ್ಯರ ಬಿರುದಾವಲಿ ಎಂತೆಂದೊಡೆ ॥
7 ಪಂಡಿತಪುಂಡರೀಕ ಕುಲಮಂ ಪರಿಬೋಧಿಸಿ ಯುರ್ವ್ವಿಕೊರ್ಮ್ಮ ಉದ್ದಂಡ ಕುವಾದಿ
8 ಹೃತ್ತಮಮನೋಡಿಸಿ ಕೂಡೆ ದಿಗಂಬರಪ್ರಭಾಮಂಡನ ವೃತ್ತಮಂ ತಳೆದು ಭವ್ಯರಥಾ
9 ಂಗಮನೋವುತಾವಗಂ ಪಂಡಿತದೇವಸೂರ್ಯ್ಯನೆಸೆದಂ ನಯವಾಗ್ರುಚಿಯಿಂ ನಿರಂತರಂ ॥
10 ಸ್ವಸ್ತಿ ಶ್ರೀಮದ್ರಾಯರಾಜಗುರು ಮಂಡಲಾಚಾರ್ಯಮಹಾವಾದವಾದೀಶ್ವರ
11 ರಾಯವಾದಿಪಿತಾಮಹ ಸಕಲ ವಿದ್ವಜ್ಜನ ಚಕ್ರವರ್ತ್ತಿಗಳುಂ ಬಲ್ಲಾಳರಾಯ ಜೀವರಕ್ಷಪಾ
12 ಲಕಾದ್ಯನೇಕ ಬಿರುದಾವಲೀ ವಿರಾಜಮಾನರುಮಪ್ಪ ಶ್ರೀಮಚ್ಚಾರುಕೀರ್ತ್ತಿಪಂಡಿತ ದೇವರು
13 ಗಳ ಪ್ರಶಿಷ್ಯರಾದ ತಚ್ಛಿಷ್ಯ ಶ್ರೀಮದಭಿನವ ಚಾರುಕೀರ್ತ್ತಿಪಂಡಿತ ದೇವರುಗಳ ಪ್ರಿಯ
14 ಶಿಷ್ಯರಾದ ತಸ್ಯಾಗ್ರಜ ಶಿಷ್ಯ ಶ್ರೀಮಚ್ಚಾರುಕೀರ್ತ್ತಿಪಂಡಿತ ದೇವರುಗಳ ಸತೀರ್ಥ್ಯರಾದ ಶ್ರೀ
15 ಮಚ್ಛಾಂತಿಕೀರ್ತಿದೇವರು [ಗ]ಳು ಶಕವರ್ಷ ೧೪೬೬ ಸಂದ ವರ್ತ್ತಮಾನ ಕ್ರೋಧಿ ಸಂವತ್ಸ
16 ರದ ಕಾರ್ತಿಕ ಶ್ಧ ೧೫ ಲೂ ಬರಸಿದ ಶಿಲಾ ಶಾಸನದ ಕ್ರಮವೆಂತೆಂದೊಡೆ ತಮ್ಮ ಗುರು
17 ಶ್ರೀಮದಭಿನವ ಚಾರುಕೀರ್ತ್ತಿಪಂಡಿತದೇವರುಗಳು। ಕಲಿಕಾಲಧರ್ಮ್ಮತೀರ್ಥ್ಥ ಪ್ರ
18 ವರ್ತ್ತನ ನಿಮಿತ್ತವಾಗಿ ಸುವರ್ನ್ನಾವತಿ ನದಿಯಿಂದ ಸ್ವಯಂ ಪ್ರತ್ಯಕ್ಷರಾಗಿ ಶಾಂತಿತೀ
19 ರ್ತ್ಥೇಶ್ವರನು ಅನಂತನಾಥಸ್ವಾಮಿಯು ಶಕವರುಷ ೧೪೫೩ನೆಯ ವಿಕೃತು ಸಂವತ್ಸ

20 ರದ ಚೈತ್ರದಲು ಬಿಜೆಮಾಡಲಾಗಿ ಅಂಜನಗಿರಿಯ ಅಗ್ರನಿವಾಸಿಯಾಗಿರ್ದ್ದ
21 ಶಾಂತಿನಾಥಸ್ವಾಮಿಯ ಬಸದಿಗೆ ಬಿಜೆಮಾಡಿಸಿ ಗಿರಿಯಗ್ರದಲ್ಲಿ ದಾರುಮಯದ ಬ
22 ಸದಿಯ ಮಾಡಿಸಿ ಖರ ಸಂವತ್ಸರದ ಚೈತ್ರಮಾಸದಲ್ಲಿ ಸ್ವಾನುಜರಾದ ಕೊಣಸನಗರದ
23 ಶಾಂತೋಪಾಧ್ಯಾಯರ ಕೈಯ್ಯಿಂದ ಪ್ರತಿಷ್ಟೆಯ ಮಾಡಿಸಿ ಶಿಲಾಮಯವಾದ ಬಸ
24 ದಿಯ ಮಾಡಿಸೆಂದು ಬುದ್ಧಿಗಲಿಸಲಾಗಿ ಅಲ್ಲಿಂದ ಮುಂದೆ ಕ್ರೋಧಿ ಸಂವತ್ಸರದ ಕಾ
25 ರ್ತ್ತಿಕ ಶು ೧೫ ನೆಲೆಗೆ ಕಲುಗೆಲಸ ಹಾಲಧಾರೆಗಳ ನಡಸಿದ ವಿವರ ನಂಜರಾಯ
26 ಪಟ್ಟಣಕ್ಕೆ ಸಲುವ ಬೆಮ್ಮತ್ತಿ ಬೂತನಹಳಿ ಮಲ್ಗನಕೆಱೆಯ ಸಮಸ್ತ ಹಲರಿಂ ಕಲುಗೆ
27 ಲಸಕ್ಕೆ ಸಂದ ಹೊಂನ್ನು ಗ ೨೦೦ ಹನಸೋಗೆಯ ಆದಿಶ್ರೀ ಅವ್ವಗಳು ಅಂಮನಹೊಸಹ
28 ಳ್ಳಿಯ ಭುಜಬಲಿ ಶ್ರೀ ಅವ್ವಗಳಿಂದ ಗರ್ಭಗೃಹವಗ್ಯೆವಲ್ಲಿ ಕಲುಗೆಲಸಕ್ಕೆ[2] ಸಂದದು ಗ ೩೦ ಹೊಂನ್ನು
29 ತಮ್ಮ ಗುರು ಶ್ರೀಮಚ್ಚಾರುಕೀರ್ತಿ ಪಂಡಿತದೇವರುಗಳಿಗೆ ತಾವಿತ್ತಂಡಕ್ಕೆ ಮೂಱು
30 ಹಾಲಧಾರೆ ಮಧ್ಯ ಬಾಗಿಲಲಿ ವೊಂದು ಹೊತ್ತಿನ ನೈವೇದ್ಯಕ್ಕೆ ಶೆಲಸಂದದು ಗ ೫೦ ಆಹಾರದಾ
31 ನಕ್ಕೆ ಶೆಲಸಂದದು ಗ . . . ಶುಭಕೃತು ಸಂವತ್ಸರದ ಪಾಲ್ಗುನ ಶು ೧೫ಲು[1] ಅಂಜನ
32 ಗಿರಿಯ ಶಾಂತೀಶ್ವರಗೆ ಬಿದಿರೆಯ ಸಿತಾಳಮಳಿಗೆಯ ಸಮಸ್ತ ಹಲರು ಕಂನಡಿ
33 ಗ ಹಲರು ನಾನಾದೇಸಿಯ ಹಲರು ಮಾಡಿದ ಧರ್ಮ್ಮ ನಾಲು ಕಟೆದ ಕಾಲುನಡೆ
34 ವೊಂದಕ್ಕೆ ಗ ೦'೧ವನು ಆಹಾರದಾನಕ್ಕೆ ಕೊಡುವೆಉ ಯೆಂದು ಬರಸಿದ ಈ
35 ಧರ್ಮ ಶಾಸನ ಯಿಾ ಧರ್ಮ್ಮಕ್ಕೆ ತಪ್ಪಿದವರು ಗೋ ಬ್ರಾಹ್ಮರ ಕೊಂದ ದೋಷಕ್ಕೆ ಹೋಹ
36 ರು

ಅದೇ ಕಲ್ಲಿನ ಎಡಪಕ್ಕದಲ್ಲಿ :

37 ಶಕವರುಷ
38 ೧೪೬೫ನೆ
39 ಯ ಶುಭಕೃತು
40 ಸಂವತ್ಸರದ
41 ಚೈತ್ರ ಶುದ್ಧ ೧೩
42 ಬುಧವಾರ ವೃ
43 ಷಭ ಲಗ್ನದಲ್ಲಿ
44 ಮುಱುತಂಡ
45 ದೇಹಾರಗಳು
46 ಕುಲಪ್ರತಿಷ್ಟೆ
47 ಯಾಯಿತ್ತು ||
48 ದಾನಶಾಲೆಗೆ
49 ಹಳ್ಳಿವಯುಲ
50 ಗದ್ದೆಯ ಕ್ರಯದ
51 ಮಉಲ್ಯ ಗ ೭೦
52 ಕೊಲಾಯರು ಹೊ
53 ಸಗದ್ದೆ ಗಯ್ದುದ
54 ಕ್ಕೆ ಕೊಟ್ಟದು ಗ ೫೦
55 ಉಭಯಂ ವೆಚ್ಚ
56 ಗ ೧೨೦ಕೆ ಆದಾ
57 ಯ ಶ್ರೀ ಮಚ್ಚಾ
58 ರುಕೀರ್ತ್ತಿಪಂಡಿತ
59 ದೇವರುಗಳ ಶಿಷ್ಯ
60 ರು ಹನಸೋಗೆಯ ಆ
61 ದಿಶ್ರೀ ಅವ್ವಗಳು
62 ಭುಜಬಲಿ ಶ್ರೀ
63 ಅವ್ವಗಳಿಂ ಗ ೨೪
64 ಬಸವಪಟ್ಣದ ಅನ
65 ಂತಮತಿ ಅವಗಳು
66 ನೇ [ಮಿ]ಶ್ರೀ ಅವ್ವಗಳಿಂ ಸ
67 ಂದದು ಗ ೨೪ ಮು
68 ದ್ದಿಸೆಟ್ಟಿಯ ವಿಜೆ
69 ಯಶ್ರೀ ಅವ್ವಗಳಿ
70 ಂ ಸಂದದು ಗ ೧೦
71 ಮಲುಗನ ಹಳಿಯ
72 ಆದ್ಯಕ್ಕಗಳಿಂ ಸಂ
73 ಗ ೧೨ ಹಾರುವ
74 ಸೆಟ್ಟಿಯ ವಿಜೆಯ
75 ಣ ಶಟ್ಟರಿಂ ಗ ೩೦
76 ಕಂಣನೂರ ದೇವರ ರ

[1] ಈ ಅಕ್ಷರವನ್ನು ಪಂಕ್ತಿಯ ಮೇಲೆ ಬರೆದಿದೆ

[2] ಕಲುಗೆಲಸಕ್ಕೆ ಎಂಬುದನ್ನು ಪಂಕ್ತಿಯ ಮೇಲೆ ಬರೆದಿದೆ



